

# ಅಣು ಒಪ್ಪಂದವೋ ಅಮೆರಿಕಾದ ಅಡಿಯಾಳುತನವೋ?



ಸಿಪಿಐ(ಎಂ) ಪ್ರಕಟಣೆ

# ಅಣು ಒಪ್ಪಂದವೋ ಅಮೆರಿಕಾದ ಅಡಿಯಾಳುತನವೋ?

## ಭಾರತ ಮತ್ತು ಅಮೇರಿಕಾ ನಡುವಿನ ಅಣು ಒಪ್ಪಂದದ ಬಗೆಗಿನ ಹಲವು ಪ್ರಶ್ನೆಗಳು

ಪ್ರಕಟಣೆ
ಭಾರತ ಕಮ್ಯುನಿಸ್ಟ್ ಪಕ್ಷ(ಮಾರ್ಕ್ಸ್‌ವಾದಿ)
ಕರ್ನಾಟಕ ರಾಜ್ಯ ಸಮಿತಿ

**Anu Oppandavo Amerikada Adiyaluthanavo**:
Questions on India-US Nuclear Deal

Published by:

Communist Party of India ( Marxist)
Karnataka State Committee
No.12, 18th Cross, Sampangiramanagar
BANGALORE-560 027
Ph: 080-22236462

July 2008

Rs.6/-

ವಿನ್ಯಾಸ–ಮುದ್ರಣ:
ಕ್ರಿಯಾ ಪ್ರಕಾಶನ
ಬೆಂಗಳೂರು–560 027
ದೂರವಾಣಿ: 080–22234369

# ಪ್ರಸ್ತಾವನೆ

## ಬಲೆಯ ಬೇಧಿಸಿ.....

ಸಿಪಿಐ(ಎಂ) ಕರ್ನಾಟಕ ರಾಜ್ಯಸಮಿತಿ ಪರಮಾಣು ವ್ಯವಹಾರ ಎಂದು ಹೆಸರಾಗಿರುವ ಅಮೆರಿಕಾ ಸಂಯುಕ್ತ ಸಂಸ್ಥಾನಗಳು ಮತ್ತು ಭಾರತದ ನಡುವಿನ ಅಪಾಯಕಾರಿ 123 ಒಪ್ಪಂದದ ವಿವರಗಳಿರುವ ಈ ಕಿರುಪುಸ್ತಕವನ್ನು ಪ್ರಕಟಿಸುತ್ತಿದೆ. ತಾವು ಈ ಒಪ್ಪಂದವನ್ನು ರಾಷ್ಟ್ರೀಯ 'ಹಿತಾಸಕ್ತಿ'ಗಾಗಿ ಮಾಡುತ್ತಿದ್ದೇವೆ ಎಂದು ಆಳುವ ಪಕ್ಷ ಪ್ರತಿಪಾದಿಸುತ್ತಿದೆ.

ಮನಮೋಹನ ಸಿಂಗ್ ಸರಕಾರ ಸಹಿ ಹಾಕಿದ ಮತ್ತು ಕಾರ್ಯಗತಗೊಳಿಸಲು ಹೊರಟಿರುವ ಪರಮಾಣು ವ್ಯವಹಾರ ಖಂಡಿತವಾಗಿಯೂ 'ರಾಷ್ಟ್ರೀಯ ಹಿತಾಸಕ್ತಿ'ಗಳಿಗೆ ವಿರುದ್ಧವಾಗಿದೆ ಎಂದು ಸಿಪಿಐ(ಎಂ) ಮತ್ತು ಎಡಪಕ್ಷಗಳ ದೃಢಭಾವನೆ. ಈ ವ್ಯವಹಾರ ನಮ್ಮ ದೇಶದ ಮೇಲೆ ಹೇರಿರುವ ಸಾಮರಿಕ ಅಂದರೆ ಯುದ್ಧನೀತಿಗಳ ಕುರಿತಾದ ಮೈತ್ರಿ ನಮ್ಮ ದೇಶ ತನ್ನ ಸಾರ್ವಭೌಮತೆಯನ್ನು ಕಳೆದುಕೊಳ್ಳುವಂತೆ ಮಾಡುತ್ತದೆ. ಇದು ನಮ್ಮನ್ನು ವಿಶ್ವದಲ್ಲೆಲ್ಲಾ ಆಕ್ರಮಣಕಾರೀ ವರ್ತನೆ ತೋರುತ್ತಾ ಎಲ್ಲಾ ದೇಶಗಳು ತಮ್ಮ ಕಾಲ ಮೇಲೆ ಬೀಳುವಂತೆ ಬಲವಂತ ಮಾಡುತ್ತಿರುವ ಜಗತ್ತಿನ ಅತೀ ದೊಡ್ಡ ಮಿಲಿಟರಿ ಶಕ್ತಿಯ ಕಿರಿಯ ಪಾಲುದಾರರಾಗುವಂತೆ ಮಾಡುತ್ತದೆ.

ಇಸ್ರೇಲಿನಲ್ಲಿ ದೃಢವಾಗಿ ಕಾಲೂರಿ, ಪ್ಯಾಲೆಸ್ತೇನಿಯನ್ನರ ಬದುಕನ್ನು ನರಕಗೊಳಿಸಿದ ನಂತರ, ಅವರು ಇರಾಕಿನ ಮೇಲೆ ಧಾಳಿ ಮಾಡಿದರು, ಸಾಮೂಹಿಕ ವಿನಾಶದ ಶಸ್ತ್ರಾಸ್ತ್ರಗಳನ್ನು ಧ್ವಂಸಗೊಳಿಸುವ ಹೆಸರಿನಲ್ಲಿ ಸಾವಿರಾರು ಇರಾಕಿಗಳನ್ನು ಸಾಯಿಸಿದರು. ಇರಾಕಿನೊಳಗೆ ನುಗ್ಗಿ, ಅಲ್ಲಿನ ಆಗಿನ ಅಧ್ಯಕ್ಷ ಸದ್ದಾಂ ಹುಸೇನರನ್ನು ಸೆರೆ ಹಿಡಿದು, ಅಂತಿಮವಾಗಿ ಆತನನ್ನು ನೇಣಿಗೇರಿಸಿದ ನಂತರವೂ ಅವರಿಗೆ ಯಾವುದೇ ಸಾಮೂಹಿಕ ವಿನಾಶದ ಶಸ್ತ್ರಾಸ್ತ್ರ ಸಿಗಲೇ ಇಲ್ಲ. ವಾಸ್ತವವಾಗಿ ಅವರ ಧಾಳಿಗಳಿಂದಲೇ ಸಾಮೂಹಿಕ ವಿನಾಶ ನಡೆಯಿತು, ಸಾವಿರಾರು ಇರಾಕಿಗಳ, ಮುಗ್ಧ ಜನರ ಸಾಮೂಹಿಕ ಹತ್ಯೆ ನಡೆಯಿತು.

ಅವರು ಈಗ ಇರಾನಿನ ಮೇಲೆ ಧಾಳಿ ಮಾಡುವ ತವಕದಲ್ಲಿದ್ದಾರೆ. ಏಕೆಂದರೆ ಅದು ಅಫಘಾನಿಸ್ತಾನವನ್ನು ವಶಪಡಿಸಿಕೊಂಡು, ಪಾಕಿಸ್ತಾನವನ್ನು ತಮಗೆ ಬೇಕಾದಂತೆ ಕುಣಿಸುತ್ತಿರುವ ಅವರ ಪರಿಧಿಯ ಹೊರಗೆ ಉಳಿದಿರುವ ಏಕೈಕ ದೇಶ. ಇರಾನ್ ಮತ್ತು ಭಾರತ ಅವರ ಗುರಿ. ಭಾರತ ಅವರೊಂದಿಗೆ ಇರಾನ್ ವಿರುದ್ಧ ಸಾಮರಿಕ ಮೈತ್ರಿ ಮಾಡಿಕೊಂಡರೆ ಅವರ ಮಿತ್ರದೇಶವಾಗುತ್ತದೆ.

ಅಮೆರಿಕನ್ ಆಳರಸರು ಮತ್ತು ಅವರ ಭಾರತೀಯ ಬಾಲಬಡುಕರು ಹಾಗೂ ಸರಿಯಾದ ದಾರಿ ತಿಳಿಯದ ಮಾಧ್ಯಮಗಳು ಈ ಪರಮಾಣು ವ್ಯವಹಾರ ನಮ್ಮ ಇಂಧನ ಭದ್ರತೆಗಾಗಿ, ವಿದ್ಯುತ್ ಭದ್ರತೆಗಾಗಿ ಎಂದು ಪ್ರಚಾರ ಮಾಡುತ್ತಿದ್ದಾರೆ. ಇದು ಸಂಪೂರ್ಣ ನಿಜವಲ್ಲ. ಇದರ ಪರವಾಗಿರುವ ವಾದಗಳಿಗಿಂತ ವಿರುದ್ಧವಾಗಿರುವ ವಾದಗಳೇ ಹೆಚ್ಚು ಸಮರ್ಪಕವಾಗಿ ಕಾಣುತ್ತವೆ. ಭಾರತದ ಇಂಧನ ಭದ್ರತೆ, ವಿದ್ಯುತ್ ಭದ್ರತೆಯ ಬಗ್ಗೆ ಅಮೆರಿಕ ಸಂಯುಕ್ತ ಸಂಸ್ಥಾನಗಳಿಗೆ

ನಿಜವಾಗಿಯೂ ಕಾಳಜಿ ಇದ್ದರೆ ಅವರು ಇರಾನ್-ಪಾಕಿಸ್ತಾನ-ಭಾರತ ಅನಿಲ ಕೊಳವೆಮಾರ್ಗ ವ್ಯವಹಾರಕ್ಕೆ ಭಾರತ ಸಹಿ ಹಾಕದಂತೆ ತಡೆಯುತ್ತಿರುವುದೇಕೆ? ಈ ಸಂಗತಿಯೇ ಅವರಿಗೆ ನಮ್ಮ ವಿದ್ಯುತ್ ಭದ್ರತೆಯಲ್ಲಾಗಲೀ, ಆಹಾರ ಭದ್ರತೆಯಲ್ಲಾಗಲೀ, ರಾಷ್ಟ್ರೀಯ ಭದ್ರತೆಯ ಬಗ್ಗೆಯೇ ಆಗಲಿ, ಯಾವುದೇ ಆಸಕ್ತಿಯಿಲ್ಲ ಎಂಬುದನ್ನು ಸಾಬೀತು ಮಾಡುತ್ತದೆ. ಅವರ ಕಾಳಜಿ ಅವರ ಭದ್ರತೆಯ ಬಗ್ಗೆ ಮಾತ್ರ, ಇದಕ್ಕಾಗಿ ಅವರು ಬೇರೆ ಪ್ರತಿಯೊಂದೂ ದೇಶವನ್ನು ಅಭದ್ರಗೊಳಿಸಲು ಸಿದ್ಧರಿದ್ದಾರೆ. ಈ ಪರಮಾಣು ವ್ಯವಹಾರದ ಮೂಲಕ ನಾವು ಈ ಬಲೆಗೆ ಬೀಳಲು 'ಒಪ್ಪು'ತ್ತಿದ್ದೇವೆ.

ಅಮೆರಿಕನ್ ಹಿತಾಸಕ್ತಿಗಳಿಗಾಗಿ ಕೆಲಸ ಮಾಡದೆ, ರಾಷ್ಟ್ರೀಯ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳಬೇಕು ಎಂದು ಬಯಸುವ ಪರಮಾಣು ವಿಜ್ಞಾನಿಗಳು ಈ ಒಪ್ಪಂದಕ್ಕೆ ವಿರುದ್ಧವಾಗಿದ್ದಾರೆ. ಅಮೆರಿಕನ್ ಕಂಪನಿಗಳು ನಮ್ಮ ಮೇಲೆ ಹೇರಬೇಕೆನ್ನುವ ಪರಮಾಣು ಸ್ಥಾವರಗಳನ್ನು ನಮ್ಮ ಪರಮಾಣು ವಿಜ್ಞಾನಿಗಳು ಮತ್ತು ತಂತ್ರಜ್ಞರೇ ಕಟ್ಟಬಲ್ಲರು ಎಂದು ಅವರು ಅಭಿಪ್ರಾಯ ಪಡುತ್ತಾರೆ. ಭಾರತದಲ್ಲಿ ನಾವು ರೂಪಿಸಿರುವ ಮತ್ತು ಕಟ್ಟಲು ಸಾಧ್ಯವಿರುವ ಪರಮಾಣು ಸ್ಥಾವರಗಳು ನಮ್ಮ ರಾಷ್ಟ್ರೀಯ ಉದ್ದಿಮೆಗೆ ಒಂದು ನಿಜವಾದ ಉತ್ತೇಜನೆಯನ್ನೂ ನೀಡಬಲ್ಲವು ಎಂದು ನಮ್ಮ ದೇಶಪ್ರೇಮಿ ವಿಜ್ಞಾನಿಗಳು ಹೇಳುತ್ತಾರೆ. ಭಾರತ ಸರಕಾರ ಅಮೆರಿಕಾದಲ್ಲಿ ತಯಾರಾದ ಹಳಸಲು ಪರಮಾಣು ಯಂತ್ರಸಾಮಗ್ರಿಗಳನ್ನು ಕಾಪಾಡಲು ಎರಡು ಕೋಟಿ ರೂಪಾಯಿಗಳಿಗಿಂತಲೂ ಹೆಚ್ಚು ಹಣವನ್ನು ಸುರಿಯುತ್ತದೆ. ನಮ್ಮಲ್ಲಿ ಎಲ್ಲಾ ತಾಂತ್ರಿಕ ಜ್ಞಾನ ಇರುವಾಗ ಈ ಪರಮಾಣು ಸ್ಥಾವರಗಳನ್ನು ನಾವೇ ತಯಾರಿಸುವುದು ನಮ್ಮ ರಾಷ್ಟ್ರೀಯ ಹಿತಾಸಕ್ತಿಯನ್ನು, ಮಾತ್ರವಲ್ಲ ನಮ್ಮ ಉದ್ದಿಮೆಗಳ ಹಿತಾಸಕ್ತಿಗಳನ್ನು ಕೂಡಾ ಈಡೇರಿಸುವುದಿಲ್ಲವೇ? ಆದರೆ 'ಪರಮಾಣು ಪೂರೈಕೆದಾರರ ಗುಂಪು' (ಎನ್‌ಎಸ್‌ಜಿ)ನ್ನು ತನಗೆ ಬೇಕಾದಂತೆ ಕುಣಿಸಿ ಏಕಸ್ವಾಮ್ಯ ಇಟ್ಟುಕೊಂಡಿರುವ ಅಮೆರಿಕಾ ಅವರ ರಾಷ್ಟ್ರೀಯ ಹಿತಾಸಕ್ತಿಗಳಿಗಾಗಿ ಈ ವ್ಯವಹಾರವನ್ನು ನಮ್ಮ ಮೇಲೆ ಹೇರುತ್ತಿದೆ.

ನಮ್ಮ ದೇಶಪ್ರೇಮಿ ಪರಮಾಣು ವಿಜ್ಞಾನಿಗಳು ಥೋರಿಯಂ ಆಧಾರಿತ ಪರಮಾಣು ಶಕ್ತಿಯನ್ನು ಅಭಿವೃದ್ಧಿ ಪಡಿಸುತ್ತಿದ್ದೇವೆ ಎನ್ನುತ್ತಿದ್ದಾರೆ. ಇದಕ್ಕೆ ತಗಲುವ ಖರ್ಚು ಕಡಿಮೆ, ನಾವು ಇದರಲ್ಲಿ ಸ್ವಾವಲಂಬಿಗಳೂ ಆಗಿದ್ದೇವೆ ಹಾಗೂ ಇದು ನಮ್ಮ ರಾಷ್ಟ್ರೀಯ ಹಿತಾಸಕ್ತಿಗೆ ಅನುಗುಣವಾಗಿದೆ. ಕೇರಳದ ಕರಾವಳಿ ತೀರದಲ್ಲಿ ವಿರಳ ಸಂಪನ್ಮೂಲ(rare earth)ಗಳಿದ್ದು ಅವುಗಳಿಂದ ಥೋರಿಯಂ ಅಭಿವೃದ್ಧಿ ಪಡಿಸಬಹುದು, ಇದೊಂದು ಸುಮಾರಾಗಿ ಶಾಶ್ವತವಾಗಿ ದೊರೆಯುವ ಇಂಧನವಾಗುತ್ತದೆ. ಶೇಕಡಾ 90 ಥೋರಿಯಂ ಅದಿರು ನಮ್ಮ ಕರಾವಳಿ ತೀರಗಳಲ್ಲಿ ಸಿಗುತ್ತದೆ ಎಂದು ಹೇಳಲಾಗಿದೆ. ಒಂದೇ ಅಂಶವೆಂದರೆ ಇದನ್ನು ನಾವೇ ಸಂಪೂರ್ಣವಾಗಿ ಅಭಿವೃದ್ಧಿಪಡಿಸಲು ಎರಡು-ಮೂರು ದಶಕಗಳು ಬೇಕಾಗಬಹುದು. ಅಮೆರಿಕಾ 123 ಒಪ್ಪಂದದ ಮೂಲಕ ಇದಕ್ಕೊಂದು ತಡೆ ಹಾಕಬಯಸುತ್ತಿದೆ.

ನಮ್ಮ ಥೋರಿಯಂ ಆವೃತ್ತ ಪೂರ್ಣವಾಗಿ ಕ್ರಿಯಾಶೀಲಗೊಳ್ಳುವ ವರೆಗಿನ ಈ ಒಂದೆರಡು ದಶಕಗಳ ಅವಧಿಯಲ್ಲಿ, ನಾವು ಅನಿಲ, ಜಲ, ಕಲ್ಲಿದ್ದಲಿನಿಂದ ಮತ್ತು ಸೌರಶಕ್ತಿ, ಪವನಶಕ್ತಿ ಮೊದಲಾದ ನವೀಕರಿಸಬಹುದಾದ ವಿಧಾನಗಳಿಂದ

ಕಡಿಮೆ ವೆಚ್ಚಗಳಲ್ಲಿ ವಿದ್ಯುತ್ ಸ್ಥಾವರಗಳನ್ನು ಕಟ್ಟಲು ಸಾಧ್ಯ ಎಂದೂ ಈ ದೇಶಪ್ರೇಮಿ ಪರಮಾಣು ವಿಜ್ಞಾನಿಗಳು ಹೇಳುತ್ತಾರೆ.

ನಾವು ಅಮೆರಿಕಾದ ಅಪ್ಪಣೆಗಳನ್ನು ಅನುಸರಿಸಿಕೊಂಡು ಬಂದು ನಮ್ಮ ಸ್ವಾವಲಂಬನೆಯನ್ನು ಧ್ವಂಸ ಮಾಡುವ ಬಲೆಯೊಳಗೆ ಬಿದ್ದಿದ್ದೇವೆ. ನಾವೀಗ ಕಾಣುತ್ತಿರುವುದು ಕೆಲವು ನೂರು ಶತಕೋಟ್ಯಾಧಿಪತಿಗಳು ಮತ್ತು ಕೆಲವು ಶತ-ಶತ ಕೋಟ್ಯಾಧಿಪತಿಗಳು ಹಾಗೂ ದಿನಕ್ಕೆ 20ರೂ.ಗಳಿಗಿಂತಲೂ ಕಡಿಮೆ ಆದಾಯದ ನಮ್ಮ ಶೇಕಡಾ 70 ಜನಸಮಾನ್ಯರು(NCEUS ವರದಿ). ಎಲ್ಲಾ ಜೀವನಾವಶ್ಯಕ ಸಾಮಗ್ರಿಗಳ ಬೆಲೆಗಳು ಗಗನಕ್ಕೇರುತ್ತಿವೆ. ಕರ್ನಾಟಕದ ರೈತರು ರಸಗೊಬ್ಬರ ಮತ್ತು ಬೀಜಗಳು ಸಿಗದೆ ಆತ್ಮಹತ್ಯೆಗಳಿಗೆ ಇಳಿಯಬೇಕಾಗಿ ಬಂದಿದೆ. ಮುಂಬರುವ ದಿನಗಳಲ್ಲಿ ಇದನ್ನು ನಿಲ್ಲಿಸಲಾಗದಿದ್ದರೆ ಆತ್ಮಹತ್ಯೆಗಳು ಮತ್ತು ಹಸಿವಿನಿಂದ ಸಾವುಗಳು ಸಾವಿರ-ಸಾವಿರ ಸಂಖ್ಯೆಗಳಲ್ಲಿ ಸಂಭವಿಸಬಹುದು. ಏಕೆಂದರೆ ನಾವು ವಿದೇಶಗಳ ಅಪ್ಪಣೆಗಳನ್ನು ಪಾಲಿಸಿದ್ದರಿಂದ ನಮ್ಮ ಆಹಾರ ಭದ್ರತೆಗೆ ಭಾರೀ ಬೆದರಿಕೆ ಎದುರಾಗುತ್ತಿದೆ.

ಇಂದು ಸಾಧ್ಯವಾಗುವುದಿಲ್ಲವಾದರೆ ಎಂದೆಂದೂ ಸಾಧ್ಯವಿಲ್ಲ ಎಂಬ ಪರಿಸ್ಥಿತಿಯಿದೆ. ಈ ಪರಮಾಣು ವ್ಯವಹಾರವನ್ನು, ಅದು ಈಗ ಇರುವ ಸ್ವರೂಪದಲ್ಲಿ ತಡೆಯಲು ನಮಗೆ ಸಾಧ್ಯವಾಗದಿದ್ದರೆ ನಾವು ಪರಮ ತ್ಯಾಗ-ಬಲಿದಾನಗಳಿಂದ ಗಳಿಸಿದ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತೇವೆ.

ಕಿತ್ತೂರು ಚೆನ್ನಮ್ಮ ಮೊದಲ ಬಾರಿಗೆ ವಿದೇಶಿ ಆಳ್ವಿಕೆಯ ವಿರುದ್ಧ ಬಂಡೆದ್ದ, 1799ರಲ್ಲಿ ಟಿಪ್ಪು ಸುಲ್ತಾನ ಪ್ರಾಣಾರ್ಪಣೆ ಮಾಡಿದ, ವಿಶ್ವೇಶ್ವರಯ್ಯನವರು ಸಾರ್ವಜನಿಕ ವಲಯದ ಪಥಪ್ರದರ್ಶಕರಾಗಿ ದೊಡ್ಡ ಉದ್ದಿಮೆಗಳನ್ನು ಹೊಂದಿದ ಕರ್ನಾಟಕ ಈಗ ವಿದೇಶೀ ಬಂಡವಾಳದ ಹಿತ್ತಿಲಾಗಿ ಪರಿವರ್ತನೆಗೊಳ್ಳುತ್ತಿದೆ. ಅಮೆರಿಕಾದೊಡನೆ ಈ ಸಾಮರಿಕ ಮೈತ್ರಿಯ ಹಿಂದಿರುವ ಅಪಾಯವನ್ನು, ನಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಅಪಾಯವನ್ನು ನಮ್ಮ ಜನತೆ ಅರಿಯಬೇಕಾಗಿದೆ.

ಇಂತಹ ಒಂದು ಸನ್ನಿವೇಶದಲ್ಲಿ ನಮ್ಮ ಪಕ್ಷ ಯುಪಿಎ ಸರಕಾರಕ್ಕೆ ಬೆಂಬಲವನ್ನು ಹಿಂತೆಗೆದುಕೊಂಡ ನಂತರ ಈ ಕಿರುಪುಸ್ತಕವನ್ನು ನಾವು ಬಿಡುಗಡೆ ಮಾಡುತ್ತಿದ್ದೇವೆ. ಇದನ್ನು ಕರ್ನಾಟಕದಲ್ಲಿ ಎಲ್ಲಾ ದೇಶಪ್ರೇಮಿ ವ್ಯಕ್ತಿಗಳು ಬಳಸಿಕೊಳ್ಳುತ್ತಾರೆ ಎಂಬುದು ನಮ್ಮ ನಿರೀಕ್ಷೆ.

**ವಿ.ಜೆ.ಕೆ.ನಾಯರ್**
ಕಾರ್ಯದರ್ಶಿ
ಕರ್ನಾಟಕ ರಾಜ್ಯ ಸಮಿತಿ,
ಭಾರತ ಕಮ್ಯುನಿಸ್ಟ್ ಪಕ್ಷ(ಮಾರ್ಕ್ಸ್‌ವಾದಿ)

# ಹಲವು ಪ್ರಶ್ನೆಗಳು







## 123 ಒಪ್ಪಂದ ಮತ್ತು ಹೈಡ್ ಆಕ್ಟ್ ಎಂದರೇನು?

ಅಮೆರಿಕಾ ಸಂಯುಕ್ತ ಸಂಸ್ಥಾನ ಪರಮಾಣು ಶಕ್ತಿಯ ಶಾಂತಿಯುತ ಬಳಕೆ ಕುರಿತಂತೆ ಬೇರೆ ಯಾವುದೇ ದೇಶದೊಂದಿಗೆ ವ್ಯವಹಾರ ನಡೆಸಬೇಕಾದರೆ ಈ ಬಗ್ಗೆ ಒಂದು ಒಪ್ಪಂದ ಮಾಡಿಕೊಳ್ಳಬೇಕು ಎಂದು ಅಲ್ಲಿನ ಅಣುಶಕ್ತಿ ಕಾನೂನಿನ 123 ನೇ ವಿಭಾಗ ವಿಧಿಸುತ್ತದೆ. ಇಂತಹ ಸುಮಾರು 25 ಒಪ್ಪಂದ ಗಳನ್ನು ಅಮೇರಿಕಾ ವಿವಿಧ ದೇಶಗಳೊಂದಿಗೆ ಮಾಡಿದೆ. ಈ ಹಿಂದೆ 1963ರಲ್ಲಿ ಭಾರತದೊಂದಿಗೂ ಇಂತಹ ಒಂದು ಒಪ್ಪಂದ ಮಾಡಿಕೊಂಡಿತ್ತು. ಈ ಬಾರಿಯ ಒಪ್ಪಂದದ ಪ್ರಕ್ರಿಯೆ ಜುಲೈ 18, 2005 ರಂದು ಭಾರತದ ಪ್ರಧಾನ ಮಂತ್ರಿಗಳ ಅಮೆರಿಕಾ ಭೇಟಿಯ ಸಂದರ್ಭದಲ್ಲಿ ಆರಂಭವಾಯಿತು. ಭಾರತ ಪೋಖ್ರಾನ್‌ನಲ್ಲಿ 1974ರಲ್ಲಿ ನಡೆಸಿದ ಮೊದಲ ಪರಮಾಣು ಪರೀಕ್ಷಣೆ ಹಾಗೂ 1998ರಲ್ಲಿ ನಡೆಸಿದ ಎರಡನೆ ಪರೀಕ್ಷಣೆಯಿಂದಾಗಿ ಹಲವು ನಿರ್ಬಂಧಗಳಿಗೆ ಒಳಗಾಗಿದ್ದು ಅವುಗಳಿಂದ ಹೊರಬರಲು ಇಂತಹ ಒಂದು ವ್ಯವಹಾರ ಬೇಕಾಗಿದೆ ಎಂದು ಈ ಪ್ರಕ್ರಿಯೆ ಆರಂಭವಾಯಿತು. ಮನಮೋಹನ್ ಸಿಂಗ್ ಮತ್ತು ಬುಶ್ ಪರಮಾಣು, ಬಾಹ್ಯಾಕಾಶ ಮತ್ತು ಇತರ ಪ್ರಕ್ರಿಯಗಳಲ್ಲಿ ಸಹಕಾರ ಕುರಿತಂತೆ ಒಂದು ಹೇಳಿಕೆ ನೀಡಿದರು. ಮುಂದೆ ಅಧ್ಯಕ್ಷ ಬುಶ್‌ರವರ ಭಾರತ ಭೇಟಿ ಕಾಲದಲ್ಲಿ ಭಾರತದ ನಾಗರಿಕ ಮತ್ತು ಮಿಲಿಟರಿ ಪರಮಾಣು ಸೌಲಭ್ಯಗಳನ್ನು ಪ್ರತ್ಯೇಕಿಸುವ ಬಗ್ಗೆ ಮಾರ್ಚ್ 21, 2006ರಂದು ಒಪ್ಪಂದ ನಡೆಯಿತು.

ನಂತರ 123 ಒಪ್ಪಂದದ ಕುರಿತು ಎರಡೂ ದೇಶಗಳ ನಡುವೆ ಮಾತುಕತೆಗಳು ಆರಂಭವಾದವು. ಅಮೆರಿಕಾದ ಕಾನೂನುಗಳ ಪ್ರಕಾರ ಅಲ್ಲಿನ ಕಾಂಗ್ರೆಸ್ಸಿ(ಸಂಸತ್ತು)ನ ಎರಡೂ ಸದನಗಳಲ್ಲಿ ಈ ಬಗ್ಗೆ ಚರ್ಚೆಯಾಗಬೇಕು. ಈ ಒಪ್ಪಂದಕ್ಕೆ ಕಾನೂನಿನ ಆಧಾರ ಕಲ್ಪಿಸುವ ಮಸೂದೆಗಳು ಅಲ್ಲಿಯ ಕಾಂಗ್ರೆಸ್ಸಿನ ಎರಡೂ ಸದನಗಳಲ್ಲಿ ಮಂಡಿಸಲ್ಪಟ್ಟು ಚರ್ಚೆ ನಡೆಯಿತು. ಆ ಮಸೂದೆಗಳ ಬಗ್ಗೆ ಭಾರತದ ರಾಜಕೀಯ ಪಕ್ಷಗಳಿಂದ ಮುಖ್ಯವಾಗಿ ಸಿಪಿಐ(ಎಂ) ಮತ್ತು ಇತರ ಎಡಪಕ್ಷಗಳಿಂದ ಹಾಗೂ ಕೆಲವು ಹಿರಿಯ ಅಣು ವಿಜ್ಞಾನಿಗಳಿಂದಲೂ ವಿಮರ್ಶೆಗಳು ಬಂದವು. ಈ ಹಿನ್ನೆಲೆಯಲ್ಲಿ ಅಗಸ್ಟ್ 2006 ರಲ್ಲಿ ಪ್ರಧಾನ ಮಂತ್ರಿಗಳು ಸಂಸತ್ತಿನಲ್ಲಿ ಒಂದು ವಿವರವಾದ ಉತ್ತರದಲ್ಲಿ ಹಲವು ಭರವಸೆಗಳನ್ನು ನೀಡಿದರು.

ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಕಾಂಗ್ರೆಸ್ ಡಿಸೆಂಬರ್ 18 ರಂದು 123 ಒಪ್ಪಂದಕ್ಕೆ ಆಧಾರ ಕಲ್ಪಿಸುವ ಕಾನೂನನ್ನು ಅಂಗೀಕರಿಸಿತು. ಇದನ್ನು 'ಸಂಯುಕ್ತ ಸಂಸ್ಥಾನಗಳು–ಭಾರತ ಶಾಂತಿಯುತ ಅಣು ಶಕ್ತಿ ಸಹಕಾರ ಕಾನೂನು, 2006' ಅಥವಾ ಸಂಕ್ಷಿಪ್ತವಾಗಿ ಹೈಡ್ ಆಕ್ಟ್ ಎನ್ನಲಾಗುತ್ತದೆ (ಆಗ ಅಮೆರಿಕಾದ ಕಾಂಗ್ರೆಸ್ಸಿನ ಪ್ರತಿನಿಧಿ ಸದನ ಅಥವಾ ಹೌಸ್ ಆಫ್ ರೆಪ್ರೆಸೆಂಟೇಟಿವ್ಸ್‌ನ ಅಂತರ್‍ರಾಷ್ಟ್ರೀಯ ಸಂಬಂಧಗಳ ಸಮಿತಿಯ ಅಧ್ಯಕ್ಷರ ಹೆಸರು ಹೆನ್ರಿ ಜೆ ಹೈಡ್). ಈ ಕಾನೂನಿಗೂ ಭಾರತದಲ್ಲಿ ಬಹಳ ಟೀಕೆಗಳು ಬಂದವು.

123 ಒಪ್ಪಂದಕ್ಕೆ ಮಾತುಕತೆಗಳು ಮುಂದುವರೆದವು. ಜುಲೈ 17ರಿಂದ 20ರವರೆಗೆ ವಾಶಿಂಗ್ಟನ್‌ನಲ್ಲಿ ಐದನೆ ಸುತ್ತಿನ ಮಾತುಕತೆಗಳು ನಡೆದವು. ಜುಲೈ 21, 2007ರಂದು

123 ಒಪ್ಪಂದವನ್ನು ಅಂತಿಮಗೊಳಿಸಲಾಗಿದೆ ಎಂದು ಪ್ರಕಟಿಸಲಾಯಿತು. ಮೇಲ್ನೋಟಕ್ಕೆ ಈ ಒಪ್ಪಂದ ಅದುವರೆಗೆ ಬಂದ ಟೀಕೆಗಳನ್ನು ಗಮನಕ್ಕೆ ತಗೊಂಡಿದೆ ಎಂದು ಹೇಳಲಾದರೂ ಇದು ಅದಾಗಲೇ ಅಮೆರಿಕಾದ ಸಂಸತ್ತು ಅಂಗೀಕರಿಸಿದ ಹೈಡ್ ಆಕ್ಟ್‌ಗೆ ಒಳಪಟ್ಟಿದ್ದು ಅದು ಹಲವು ಆಕ್ಷೇಪಾರ್ಹ ಅಂಶಗಳನ್ನು ಒಳಗೊಂಡಿದೆ ಎಂದು ಕಂಡು ಬಂತು. ಆದ್ದರಿಂದ ಇದನ್ನು ಭಾರತದ ಸಂಸತ್ತಿನಲ್ಲೂ ಚರ್ಚಿಸಬೇಕು ಎಂಬ ಬೇಡಿಕೆ ಬಂತು. ಸಿಪಿಐ(ಎಂ) ಮತ್ತು ಎಡಪಕ್ಷಗಳು ಮಾತ್ರವಲ್ಲ, ಬಿಜೆಪಿ ಮತ್ತು ಇತರ ವಿರೋಧ ಪಕ್ಷಗಳಿಂದಲೂ ವಿರೋಧ ವ್ಯಕ್ತವಾಯಿತು. ಭಾರತದ ಪರಮಾಣು ತಂತ್ರಜ್ಞಾನದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿರುವ ಹಿರಿಯ ಪರಮಾಣು ವಿಜ್ಞಾನಿಗಳೂ ಇದನ್ನು ವಿರೋಧಿಸಿದರು. ಈ ಒಪ್ಪಂದ ಕಾರ್ಯಗತವಾಗಬೇಕಾದರೆ ಭಾರತದ ಸಂಸತ್ತಿನ ಅಂಗೀಕಾರವೇನೂ ಬೇಕಾಗಿಲ್ಲ. ಆದರೆ ಅಮೆರಿಕಾದ ಕಾಂಗ್ರೆಸ್ ಇದಕ್ಕೆ ಅನುಮೋದನೆ ನೀಡಬೇಕಾಗುತ್ತದೆ. ಅದರ ಮೊದಲು ಅಂತರ್ರಾಷ್ಟ್ರೀಯ ಅಣು ಶಕ್ತಿ ಸಂಸ್ಥೆ(ಐಎಇಎ) ಯೊಂದಿಗೆ ಅನಂತಕಾಲದ ಸುರಕ್ಷಣಾ ಕ್ರಮಗಳ ಬಗ್ಗೆ ಮಾತುಕತೆ ನಡೆಸಿ ಒಪ್ಪಂದಕ್ಕೆ (Safeguards Agreement)ಬರಬೇಕು. ನಂತರ ಪರಮಾಣು ಪೂರೈಕೆ ಗುಂಪು(NSG) ತನ್ನ ಮಾರ್ಗನಿರ್ದೇಶನಗಳಿಗೆ ಅನುಸಾರವಾಗಿ ಪರಮಾಣು ಸಾಮಗ್ರಿಗಳನ್ನು ಪೂರೈಸಲು ಒಪ್ಪಬೇಕು. ಭಾರತದಂತಹ ಅಣು ಪ್ರಸರಣ ನಿಷೇಧ ಸಂಧಿಗೆ ಸಹಿ ಹಾಕದ ದೇಶದೊಂದಿಗೆ ಈ ಗುಂಪಿನ ದೇಶಗಳು ಪರಮಾಣು ವ್ಯಾಪಾರ ನಡೆಸುವಂತಿಲ್ಲ. ಹಾಗೇನಾದರೂ ನಡೆಸಬೇಕಾದರೆ ಈ ಗುಂಪು ನಿರ್ದಿಷ್ಟವಾಗಿ ವಿನಾಯ್ತಿ ನೀಡಬೇಕು. ಎಡಪಕ್ಷಗಳು ಅಗಸ್ಟ್ 2006ರಲ್ಲಿ ಒಂದು ಹೇಳಿಕೆ ನೀಡಿ ಈ ಒಪ್ಪಂದಕ್ಕೆ ಬಂದಿರುವ ಆಕ್ಷೇಪಣೆಗಳು ಗಂಭೀರ ಸ್ವರೂಪದವಾಗಿದ್ದು ಈ ಬಗ್ಗೆ ಸಂಪೂರ್ಣ ಚರ್ಚೆಯಾಗದೆ ಇದನ್ನು ಈಗಲೇ ಕಾರ್ಯಗತಗೊಳಿಸುವ ಮಾತುಕತೆಗಳಿಗೆ ಮುಂದಾಗಬಾರದು ಎಂದು ಆಗ್ರಹಿಸಿದವು. ಆರಂಭದಲ್ಲಿ ಕಾಂಗ್ರೆಸ್ ಮುಖಂಡರು ಇದನ್ನು ನಿರ್ಲಕ್ಷಿಸಿದರೂ ಎಡಪಕ್ಷಗಳ ದೃಢ ನಿಲುವಿನಿಂದಾಗಿ ಈ ಬಗ್ಗೆ ಚರ್ಚಿಸಲು ಸಪ್ಟಂಬರ್ 2007ರಲ್ಲಿ ಯುಪಿಎ ಮತ್ತು ಎಡಪಕ್ಷಗಳ ಮುಖಂಡರಿರುವ ಒಂದು ಸಮಿತಿಯನ್ನು ರಚಿಸಲಾಯಿತು.

### ❖ ಯುಪಿಎ–ಎಡಪಕ್ಷಗಳ ಸಮಿತಿಯಲ್ಲಿ ಹಲವು ಬಾರಿ ಚರ್ಚೆಯಾದರೂ ಈಗಿನ ರಾಜಕೀಯ ಬಿಕ್ಕಟ್ಟು ಏಕೆ ಉಂಟಾಯಿತು?

ಈ ಸಮಿತಿ ಒಟ್ಟು 9 ಬಾರಿ ಸಭೆ ಸೇರಿದೆ. ನವಂಬರ್ 2007ರ ವರೆಗೆ ನಡೆದ ಆರು ಸಭೆಗಳಲ್ಲಿ ಯುಪಿಎ ಮತ್ತು ಎಡಪಕ್ಷಗಳು ಐದು ಟಿಪ್ಪಣಿಗಳನ್ನು ವಿನಿಮಯ ಮಾಡಿಕೊಂಡವು. ಎಡಪಕ್ಷಗಳು ಸಲ್ಲಿಸಿದ ಟಿಪ್ಪಣಿಗಳಲ್ಲಿ ಹೈಡ್ ಆಕ್ಟ್, 123 ಒಪ್ಪಂದದ ಮೇಲೆ ಅದರ ಪ್ರಭಾವ ಮತ್ತು ಒಟ್ಟಾರೆಯಾಗಿ ಪರಮಾಣು ಸಹಕಾರದ ಮೇಲೆ ತಮ್ಮ ಅಭಿಪ್ರಾಯವನ್ನು ವಿವರವಾಗಿ ನೀಡಿದ್ದವು. ಈ ಮೂರು ತಿಂಗಳಲ್ಲಿ ಎಡಪಕ್ಷಗಳು ಅಮೆರಿಕಾ ವಿವಿಧ ದೇಶಗಳೊಂದಿಗೆ ಮಾಡಿಕೊಂಡ 123 ಒಪ್ಪಂದಗಳ ಹೋಲಿಕೆಯನ್ನು ನಡೆಸಿದವು. ಹೈಡ್ ಆಕ್ಟ್‌ನ ಎಲ್ಲ ಆಯಾಮಗಳನ್ನು ಪರಿಶೀಲಿಸಲಾಯಿತು ; ವಿದೇಶಾಂಗ ನೀತಿಯ ಮೇಲೆ, ನಮ್ಮ ದೇಶದ ಭದ್ರತೆಯ ಮೇಲೆ ಅದು ಹೇಗೆ ಪರಿಣಾಮ ಬೀರುತ್ತದೆ ಎಂಬುದನ್ನು ಪರಿಶೀಲಿಸಲಾಯಿತು. ಆರಂಭದಲ್ಲಿ ಇದೇ ಈ ಸಮಿತಿಗೆ ಕೊಟ್ಟ ಅಜೆಂಡಾವಾಗಿತ್ತು.

ನಂತರ ನವಂಬರ್ 2007 ರಲ್ಲಿ ನಡೆದ ಆರನೇ ಸಭೆಯಲ್ಲಿ ಭಾರತ ಸರಕಾರ ಅಂತರರಾಷ್ಟ್ರೀಯ ಅಣು ಶಕ್ತಿ ಸಂಸ್ಥೆ (ಐಎಇಎ)ಯೊಂದಿಗೆ ಸುರಕ್ಷತಾ ಒಪ್ಪಂದದ ಬಗ್ಗೆ ಮಾತುಕತೆ ನಡೆಸುತ್ತದೆ, ಆ ಮಾತುಕತೆಗಳ ಫಲಿತಾಂಶವನ್ನು ಸಮಿತಿಯ ಮುಂದೆ ಇಟ್ಟು ಸಮಿತಿಯ ಅಭಿಪ್ರಾಯವನ್ನು ಗಮನಕ್ಕೆ ತಗೊಂಡ ನಂತರವೇ ಸರಕಾರ ಮುಂದುವರೆಯಬೇಕು ಎಂದು ನಿರ್ಧರಿಸಲಾಯಿತು.

ಈ ವೇಳೆಗೆ, ಎಡಪಕ್ಷಗಳ ಸತತ ಪ್ರಯತ್ನಗಳಿಂದಾಗಿ ಭಾರತದ ಸಂಸತ್ತಿನಲ್ಲಿ ಈ ಒಪ್ಪಂದ ಚರ್ಚೆಗೆ ಬಂತು. ವಾಸ್ತವವಾಗಿ ಈ ಚರ್ಚೆ ಸಂಸತ್ತಿನ ಮಳೆಗಾಲದ ಅಧಿವೇಶನದಲ್ಲಿಯೇ ನಡೆಯಬೇಕಾಗಿತ್ತು. ಸಂಸದೀಯ ಕಲಾಪಗಳಿಗೆ ಅಡ್ಡಿಪಡಿಸುವ ಬಿಜೆಪಿ ತಂತ್ರದಿಂದಾಗಿ ಅದು ಸಾಧ್ಯವಾಗಲಿಲ್ಲ. ಆಗಿದ್ದರೆ ಆರಂಭದ ಹಂತದಲ್ಲೇ ಈ ಒಪ್ಪಂದದತ್ತ ಮುಂದುವರೆಯದಂತೆ ಸರಕಾರಕ್ಕೆ ಎಚ್ಚರಿಕೆ ನೀಡಬಹುದಿತ್ತು. ಸಂಸತ್ತಿನ ಎರಡೂ ಸದನಗಳಲ್ಲಿ ಬಹುಪಾಲು ಸದಸ್ಯರು ಈ ಒಪ್ಪಂದವನ್ನು ವಿರೋಧಿಸಿದರು. ವಿರೋಧ ಮುಖ್ಯವಾಗಿ ಮೂರು ಸ್ವರೂಪಗಳಲ್ಲಿ ಬಂದವು. ಮೊದಲನೆಯದಾಗಿ, ಹೈಡ್ ಆಕ್ಟ್‌ನ ಮೂಲ ಮತ್ತು ಆಗಸ್ಟ್ 2006ರಲ್ಲಿ ಪ್ರಧಾನ ಮಂತ್ರಿಗಳು ಸಂಸತ್ತಿಗೆ ನೀಡಿದ ಭರವಸೆಗಳನ್ನು 123 ಒಪ್ಪಂದದಲ್ಲಿ ಅಳವಡಿಸಲಾಗಿಲ್ಲ ಎಂಬ ಕಾರಣದಿಂದ ಸರಕಾರ ಈ ಒಪ್ಪಂದವನ್ನು ಕಾರ್ಯಗತಗೊಳಿಸುವ ಮುಂದಿನ ಕ್ರಮಗಳನ್ನು ಕೈಗೊಳ್ಳಬಾರದು. ಎರಡನೆಯದಾಗಿ, ಈ ವ್ಯವಹಾರದ ಬಗ್ಗೆ ಮರು ಮಾತುಕತೆಗಳನ್ನು ನಡೆಸಬೇಕು ಎಂಬ ಬೇಡಿಕೆ ಬಂತು. ಮೂರನೆಯದಾಗಿ, ಎಲ್ಲಾ ಸಂದೇಹಗಳನ್ನು ಪರಿಹರಿಸಿ ಒಂದು ಒಮ್ಮತವನ್ನು ರೂಪಿಸಿದ ಮೇಲೆಯೇ ಮುಂದುವರೆಯಬೇಕು ಎಂದು ಕೆಲವು ಪಕ್ಷಗಳು ನಿಲುವು ತಳೆದವು. ಒಂದು ಜಂಟಿ ಸಂಸದೀಯ ಸಮಿತಿಯನ್ನು ರಚಿಸಿ ಈ ಪ್ರಶ್ನೆಯನ್ನು ಅದಕ್ಕೆ ಒಪ್ಪಿಸಬೇಕು ಎಂಬ ಬೇಡಿಕೆಯೂ ಬಂತು.

ಸಿಪಿಐ(ಎಂ) ಮತ್ತು ಇತರ ಎಡಪಕ್ಷಗಳು ತಮ್ಮ ಆಕ್ಷೇಪಗಳನ್ನು ಪುನರುಚ್ಚರಿಸಿದವು. ಸಮಾಜವಾದಿ ಪಕ್ಷದ ಸದಸ್ಯ ಶ್ರೀ ರಾಮಗೋಪಾಲ ಯಾದವ್ ಕೂಡಾ ಹೈಡ್ ಆಕ್ಟ್, ಪರಮಾಣು ಶಕ್ತಿಯ ವೆಚ್ಚ, ವಿದೇಶಾಂಗ ನೀತಿಯ ಮೇಲೆ ಪ್ರತಿಕೂಲ ಪರಿಣಾಮ ಹಾಗೂ ನಮ್ಮ ಸ್ವತಂತ್ರ ಪರಮಾಣು ಕಾರ್ಯಕ್ರಮಕ್ಕೆ ಅದರಿಂದಾಗುವ ಹಾನಿ ಇತ್ಯಾದಿ ಎಲ್ಲ ವಿಷಯಗಳ ಕುರಿತು ಮಾತಾಡಿದರು. ತೆಲುಗು ದೇಶಂನ ಶ್ರೀ ಆದಿಕೇಶವುಲು ಭಾಷಣದಲ್ಲಿ ಇದು ದೇಶದ ಸಾರ್ವಭೌಮತೆಗೆ ಅಡ್ಡಿ ತರುವ ಅತ್ಯಂತ ಅಪಾಯಕಾರೀ ಪ್ರಶ್ನೆ , ಯುಎನ್‌ಪಿಎ ಇದನ್ನು ವಿರೋಧಿಸುತ್ತದೆ ಎಂದರು. ಚರ್ಚೆಗಳ ಕೊನೆಯಲ್ಲಿ ಸಂಸತ್ತಿನಲ್ಲಿ ಸಿಪಿಐ(ಎಂ) ಗುಂಪಿನ ಮುಖಂಡರಾದ ಬಸುದೇವ ಆಚಾರ್ಯ(ಲೋಕಸಭೆ) ಮತ್ತು ಸೀತಾರಾಂ ಯೆಚೂರಿ(ರಾಜ್ಯಸಭೆ) ಈ ಚರ್ಚೆಗಳ ಹಿನ್ನೆಲೆಯಲ್ಲಿ ಸರಕಾರ ಈ ಒಪ್ಪಂದದಲ್ಲಿ ಮುಂದುವರೆಯುವುದಿಲ್ಲ ಎಂದು ಖಡಾಖಂಡಿತ ಭರವಸೆಯನ್ನು ಕೊಡಬೇಕು ಎಂದು ಆಗ್ರಹಿಸಿದರು.

ಮಾರ್ಚ್ 2008ರಲ್ಲಿ ನಡೆದ ಯುಪಿಎ–ಎಡಪಕ್ಷಗಳ ಸಮಿತಿಯ ಏಳನೇ ಸಭೆಯಲ್ಲಿ ಮತ್ತು ಮೇ 2008ರಲ್ಲಿ ನಡೆದ ಎಂಟನೇ ಸಭೆಯಲ್ಲಿ ಈ ಸುರಕ್ಷಣಾ ಒಪ್ಪಂದದ ಪಠ್ಯ(text)ದ ಕೆಲವು ಅಂಶಗಳನ್ನು ಚರ್ಚಿಸಲಾಯಿತು. ಆದರೆ ಅದರ ಪೂರ್ಣಪಾಠವನ್ನು ಸರಕಾರ ಸಮಿತಿಯ ಮುಂದಿಡಲಿಲ್ಲ. ಆದ್ದರಿಂದ ಎಡಪಕ್ಷಗಳು ಅಥವ ಈ ಸಮಿತಿ ಈ ಸುರಕ್ಷಣಾ ಒಪ್ಪಂದದ ಕುರಿತು ಯಾವುದೇ ತೀರ್ಮಾನಗಳಿಗೆ ಬರಲು ಸಾಧ್ಯವಾಗಿರಲಿಲ್ಲ.

ಸಮಿತಿಯ 9ನೇ ಸಭೆ ಜೂನ್ 18ಕ್ಕೆ ನಡೆಯಬೇಕಾಗಿತ್ತು. ಅದನ್ನು ನಂತರ ಜೂನ್ 25ಕ್ಕೆ ಮುಂದೂಡಲಾಯಿತು. ಈ ಸಭೆಯ ಮೊದಲು ಸರಕಾರ ಸುರಕ್ಷಣಾ ಒಪ್ಪಂದದ ಮಂಜೂರಾತಿಗಾಗಿ ಐಎಇಎ ಆಡಳಿತಗಾರರ ಮಂಡಳಿಯ ಮುಂದೆ ಹೋಗುತ್ತದೆ ಎಂದು ಕಾಂಗ್ರೆಸ್ ಮುಖಂಡರು ತಿಳಿಸಿದರು. ಇದು ಯುಪಿಎ–ಎಡಪಕ್ಷಗಳ ಸಮಿತಿಯ ನವಂಬರ್ 2007ರ ಸಭೆಯ ನಿರ್ಧಾರದ ಉಲ್ಲಂಘನೆಯಾಗಿತ್ತು. ಆದ್ದರಿಂದ ಎಡಪಕ್ಷಗಳು ಇದನ್ನು ವಿರೋಧಿಸಿದವು. ಆದರೆ ದುರದೃಷ್ಟವಶಾತ್ ಪ್ರಧಾನ ಮಂತ್ರಿಗಳು ಐಎಇಎ ಮಂಜೂರಾತಿಗೆ ಹೋಗಿಯೇ ಹೋಗುತ್ತೇವೆ ಎಂಬ ಹಠಮಾರಿ ನಿಲುವು ತಳೆದರು. ಅವರಿಗೆ ಅಮೆರಿಕನ್ ಅಧ್ಯಕ್ಷರಿಗೆ ತಾನು ನೀಡಿದ ವಚನವನ್ನು ಈಡೇರಿಸುವುದೇ ಮುಖ್ಯವಾಗಿತ್ತು. ಇದೊಂದು ರಾಜಕೀಯೇತರ ನಿಲುವು, ವಿಪರೀತ ಹಣದುಬ್ಬರದ ಸಮಸ್ಯೆ ದೇಶವನ್ನು ಕಾಡುತ್ತಿರುವಾಗ ಇಂತಹ ನಿಲುವು ಕಾಂಗ್ರೆಸ್ ಮತ್ತು ಯುಪಿಎಗೆ ಹಾನಿ ತರುತ್ತದೆ ಎಂದು ಸಿಪಿಐ(ಎಂ) ಪೊಲಿಟ್ ಬ್ಯೂರೋ ಹೇಳಿತು. ಯುಪಿಎ ರಚನೆಯಾದದ್ದು ಕೋಮುವಾದಿ ಶಕ್ತಿಗಳನ್ನು ಅಧಿಕಾರದಿಂದ ದೂರವಿಡಲು. ಆದರೆ ಸರಕಾರದ ಇಂತಹ ಕ್ರಮ ಮತ್ತು ತದನಂತರದ ಪರಿಣಾಮಗಳು ಆ ಉದ್ದೇಶವನ್ನು ವಿಫಲಗೊಳಿಸುತ್ತವೆ. ಆದ್ದರಿಂದ ಕಾಂಗ್ರೆಸ್ ಮತ್ತು ಯುಪಿಎಯ ಇತರ ಪಕ್ಷಗಳು ಕೋಮುವಾದಿ ಶಕ್ತಿಗಳಿಗೆ ನೆರವಾಗುವ ಇಂತಹ ಕ್ರಮಗಳಿಗೆ ಇಳಿಯಬಾರದು ಎಂದು ಸಿಪಿಐ(ಎಂ) ಮನವಿ ಮಾಡಿಕೊಂಡಿತು. ಒಂದು ವೇಳೆ ಸರಕಾರ ಇದನ್ನು ತಿರಸ್ಕರಿಸಿ, ಸಂಸತ್ತಿನಲ್ಲಿ ಬಹುಮತದ ಬೆಂಬಲವಿಲ್ಲದ ಈ ಹಾನಿಕಾರಕ ಒಪ್ಪಂದದ ವಿಷಯದಲ್ಲಿ ಮುಂದುವರೆದರೆ ಎಡಪಕ್ಷಗಳು ಯುಪಿಎ ಸರಕಾರಕ್ಕೆ ನೀಡಿರುವ ಬೆಂಬಲವನ್ನು ಹಿಂದೆಗೆದುಕೊಳ್ಳಬೇಕಾಗುತ್ತದೆ ಎಂದು ಜೂನ್ 20ರಂದು ಹೇಳಲಾಯಿತು.

ಇದಕ್ಕೆ ಉತ್ತರವೆಂಬಂತೆ ಪ್ರಧಾನ ಮಂತ್ರಿಗಳು ಐಎಇಎ ಆಡಳಿತಗಾರರ ಮಂಡಳಿ ಸುರಕ್ಷಣಾ ಒಪ್ಪಂದಕ್ಕೆ ಮಂಜೂರಾತಿ ನೀಡಿದ ಮೇಲೆ ಮತ್ತು ಎನ್‌ಎಸ್‌ಜಿಯಿಂದ ವಿನಾಯ್ತಿ ದೊರೆತ ಮೇಲೆ ಸರಕಾರ ಮತ್ತೆ ಸಂಸತ್ತಿನ "ಭಾವನೆ" ತಿಳಿಯಲು ಬರುತ್ತದೆ ಎಂದರು. ಇದು ಅರ್ಥಹೀನವಾಗಿತ್ತು. ಏಕೆಂದರೆ ಈ ಎರಡು ಕ್ರಮಗಳನ್ನು ಕೈಗೊಂಡ ಮೇಲೆ ಮಾಡಲು ಏನೂ ಉಳಿದಿರುವುದಿಲ್ಲ. ಅಮೆರಿಕಾದ ಸಂಸತ್ತಿ( ಕಾಂಗ್ರೆಸ್)ನಲ್ಲಿ ಅದರ ಬಗ್ಗೆ ಮತದಾನ ನಡೆಯುವುದಷ್ಟೇ ಉಳಿಯುವುದು. ಆದ್ದರಿಂದ ಇಂತಹ ಒಂದು ಕ್ರಮ ಸಂಸತ್ತಿನ ಅವಗಣನೆಯಾಗುತ್ತದೆಂದ ಸಿಪಿಐ(ಎಂ) ಪೊಲಿಟ್‌ಬ್ಯೂರೋ ಇದು ದೇಶವನ್ನು, ದೇಶದ ಸಂಸತ್ತನ್ನು ಕೇಳದೆ ಜೂನ್ 2005ರಲ್ಲಿ ಅಧ್ಯಕ್ಷ ಬುಶ್‌ಗೆ ತಾನು ನೀಡಿದ ವಚನವನ್ನು ಹೇಗಾದರೂ ಈಡೇರಿಸಿ ಕೊಡಬೇಕು ಎಂಬ ಪ್ರಧಾನ ಮಂತ್ರಿಗಳ ಗೀಳನ್ನು ತೋರಿಸುತ್ತದೆ ಎಂದು ಬೇಸರ ವ್ಯಕ್ತಪಡಿಸಿತು.

ಈ ಹಿನ್ನೆಲೆಯಲ್ಲಿ ಜುಲೈ 4, 2008 ರಂದು ಎಡಪಕ್ಷಗಳು ಯುಪಿಎ–ಎಡಪಕ್ಷಗಳ ಸಮಿತಿಯ ಸಂಚಾಲಕರಾದ ಪ್ರಣಬ್ ಮುಖರ್ಜಿಯವರಿಗೆ ಪತ್ರ ಬರೆದು ಸರಕಾರ ಐಎಇಎ ಆಡಳಿತ ಮಂಡಳಿಗೆ ಸುರಕ್ಷಣಾ ಒಪ್ಪಂದದ ಮಂಜೂರಾತಿಗಾಗಿ ಹೋಗುತ್ತದೆಯೇ ಎಂದು ಜುಲೈ 7, 2008ರೊಳಗೆ ತಿಳಿಸಬೇಕು ಎಂದು ಕೋರಿದವು. ಜುಲೈ 10 ರಂದು ಸಮಿತಿಯ ಮತ್ತೊಂದು ಸಭೆ ನಡೆಯುವುದು ಎಂದು ಪ್ರಣಬ್ ಮುಖರ್ಜಿಯವರು ಜುಲೈ 7ರಂದು ತಿಳಿಸಿದರು. ಆದರೆ ಆ ವೇಳೆಗೂ ಸುರಕ್ಷಣಾ ಒಪ್ಪಂದದ ಕರಡನ್ನು

ಸಮಿತಿಗೆ ತೋರಿಸಿಲ್ಲವಾದ್ದರಿಂದ ಸಮಿತಿ ಏನನ್ನೂ ಹೇಳಲು ಸಾಧ್ಯವಿರಲಿಲ್ಲ. ಅಲ್ಲದೆ ಈ ನಡುವೆ ಪ್ರಧಾನ ಮಂತ್ರಿಗಳು ಜಿ–8ರ ಸಭೆಯ ಸಂದರ್ಭದಲ್ಲಿ ಅಮೇರಿಕಾದ ಅಧ್ಯಕ್ಷ ಬುಶ್‌ರೊಂದಿಗೆ ಮಾತನಾಡಲೆಂದು ಜಪಾನಿಗೆ ಹೊರಟಿರುವಾಗಲೇ ವಿಮಾನದಲ್ಲಿ ಪತ್ರಕರ್ತರ ಮುಂದೆ ಸರಕಾರ ಐಎಇಎ ಆಡಳಿತ ಮಂಡಳಿ ಬಳಿ ಹೋಗುತ್ತದೆ ಎಂದು ಪ್ರಕಟಿಸಿದರು. ಆದ್ದರಿಂದ ಈ ಸಭೆ ನಿಷ್ಪ್ರಯೋಜಕ ಎಂದು ಹೇಳಿದ ಎಡಪಕ್ಷಗಳು ಯುಪಿಎ ಸರಕಾರಕ್ಕೆ ಬೆಂಬಲವನ್ನು ಹಿಂತೆಗೆದುಕೊಂಡವು ಜುಲೈ 9 ರಂದು ಈ ಬಗ್ಗೆ ರಾಷ್ಟ್ರಪತಿಗಳಿಗೆ ಪತ್ರವನ್ನು ನೀಡಲಾಯಿತು. ಹೀಗೆ ಪ್ರಧಾನಿಗಳು ಎಡಪಕ್ಷಗಳಿಗೂ, ದೇಶಕ್ಕೂ ನೀಡಿದ ವಚನವನ್ನು ಭಂಗಗೊಳಿಸಿದರು.

ಯುಪಿಎ ಸರಕಾರ 2004 ರಲ್ಲಿ ಒಂದು ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಆಧಾರದಲ್ಲಿ ಎಡಪಕ್ಷಗಳ ಬೆಂಬಲದೊಂದಿಗೆ ಅಸ್ತಿತ್ವಕ್ಕೆ ಬಂತು. ಅದರ ಉದ್ದೇಶ ಕೋಮುವಾದಿ ಶಕ್ತಿಗಳ ವಿರುದ್ಧ ಹೋರಾಡುವುದು ಮತ್ತು ಅವರು ಅಧಿಕಾರದಲ್ಲಿದ್ದಾಗ ದೇಶದ ಜಾತ್ಯಾತೀತ ರಾಜಕೀಯ ವ್ಯವಸ್ಥೆಗೆ ಉಂಟು ಮಾಡಿದ ಹಾನಿಯನ್ನು ಸರಿಪಡಿಸುವುದು. ಇದಕ್ಕೆ ಜನಗಳಿಗೆ ಪರಿಹಾರ ಒದಗಿಸುವ, ಭಾರತದ ಸಮಗ್ರತೆಯನ್ನು ರಕ್ಷಿಸುವ ಮತ್ತು ಸ್ವತಂತ್ರ ವಿದೇಶಾಂಗ ನೀತಿಯನ್ನು ಅನುಸರಿಸುವ ಒಂದು ಪರಸ್ಪರ ಹೆಣೆದುಕೊಂಡ ಸಮಗ್ರ ನೀತಿಗಳ ಆವಶ್ಯಕತೆಯಿತ್ತು. ಹಣದುಬ್ಬರದ ನಾಗಾಲೋಟ ಮತ್ತು ಕಿತ್ತು ತಿನ್ನುವ ಬೆಲೆಯೇರಿಕೆಯ ಹೊರೆಯಿರುವಾಗ ಇವುಗಳಿಂದ ಜನರನ್ನು ಕಾಪಾಡುವ ಜವಾಬ್ದಾರಿ ನಿರ್ವಹಿಸದೇ ಮನಮೋಹನ ಸಿಂಗ್ ಸರಕಾರ ಈ ಪರಮಾಣು ವ್ಯವಹಾರದಲ್ಲಿ ಮುಂದುವರೆದು ತಮಗೆ ಬುಶ್ ಆಡಳಿತಕ್ಕೆ ನೀಡಿದ ವಚನವನ್ನು ಈಡೇರಿಸುವುದು ಮುಖ್ಯವೇ ಹೊರತು ಭಾರತದ ಜನತೆಗೆ ನೀಡಿದ ವಚನವನ್ನು ಈಡೇರಿಸುವುದಲ್ಲ ಎಂದು ಸ್ಪಷ್ಟವಾಗಿ ತೋರಿಸಿಕೊಟ್ಟಿದೆ. ಈ ಹಿನ್ನೆಲೆಯಲ್ಲಿ ಎಡಪಕ್ಷಗಳು ಈ ಸರಕಾರಕ್ಕೆ ನಾಲ್ಕು ವರ್ಷಗಳ ಹಿಂದೆ ನೀಡಿರುವ ಬೆಂಬಲವನ್ನು ಹಿಂತೆಗೆದುಕೊಳ್ಳುತ್ತಿದ್ದೇವೆ ಎಂದವು.

ಸಾಮಾನ್ಯ ಕನಿಷ್ಟ ಕಾರ್ಯಕ್ರಮದಲ್ಲಿ ಅಮೆರಿಕಾದೊಂದಿಗೆ ಸಾಮರಿಕ ಮೈತ್ರಿ (strategic alliance)ಯ ಅಂಶವೇ ಇಲ್ಲ. ಆದ್ದರಿಂದ ಮನಮೋಹನ್ ಸಿಂಗ್ ಸರಕಾರ ಸಾಮಾನ್ಯ ಕನಿಷ್ಠ ಕಾರ್ಯಕ್ರಮವನ್ನು ಸಂಪೂರ್ಣವಾಗಿ ಉಲ್ಲಂಘಿಸುವ ತಪ್ಪು ಮಾಡಿದೆ. ಜನಗಳಿಗೆ ಮತ್ತು ದೇಶದ ಸಾರ್ವಭೌಮತೆಗೆ ಹಾನಿಕಾರಕವಾದ ಇಂತಹ ಒಂದು ದಾರಿಯನ್ನು ಬೆಂಬಲಿಸುವುದು ಎಡಪಕ್ಷಗಳಿಗೆ ಸಾಧ್ಯವಿಲ್ಲ ಎಂದು ಎಡಪಕ್ಷಗಳು ಹೇಳಿದವು.

ಈಗ ಉಂಟಾಗಿರುವ ರಾಜಕೀಯ ಬಿಕ್ಕಟ್ಟಿಗೆ ಯುಪಿಎ ಸರಕಾರವೇ ಹೊಣೆಯಾಗಿದೆ ಎಂಬುದು ಈ ಬೆಳವಣಿಗೆಗಳಿಂದ ಸ್ಪಷ್ಟವಾಗುತ್ತದೆ.

### ❖ ಈ ಘಟ್ಟದಲ್ಲಿ ಐಎಇಎ ಆಡಳಿತ ಮಂಡಳಿಯ ಬಳಿ ಹೋಗುವ ತುರ್ತು ಏನಾದರೂ ಇತ್ತೇ?

ಅದರ ಹಿಂದಿರುವ ಕಾರಣ ಬುಶ್ ಆಡಳಿತದ ಒತ್ತಾಯ. ಭಾರತ ಐಎಇಎಯೊಂದಿಗೆ ಸುರಕ್ಷಣಾ ಒಪ್ಪಂದದ ವಿಧಾನಗಳನ್ನು ಪೂರ್ಣಗೊಳಿಸಬೇಕು. ಈ ಮೂಲಕ ಅಮೆರಿಕನ್ನರು ಪರಮಾಣು ಪೂರೈಕೆದಾರರ ಗುಂಪಿ(ಎನ್‌ಎಸ್‌ಜಿ)ನಲ್ಲಿ ಭಾರತದೊಂದಿಗೆ ಪರಮಾಣು ವ್ಯಾಪಾರಕ್ಕೆ ವಿನಾಯ್ತಿ ನೀಡುವಂತೆ ಪ್ರಕ್ರಿಯೆಯನ್ನು ಔಪಚಾರಿಕವಾಗಿ ಆರಂಭಿಸುವ ಕ್ರಮವನ್ನು

ಕೈಗೊಳ್ಳಬಹುದೆಂದು ಈ ಒತ್ತಾಯ. ಪ್ರಸಕ್ತ ಅಮೆರಿಕನ್ ಕಾಂಗ್ರೆಸ್(ಸಂಸತ್ತು)ಗೆ ಈ 123 ಒಪ್ಪಂದವನ್ನು ಅಂಗೀಕರಿಸುವಷ್ಟು ಸಮಯ ಉಳಿದಿಲ್ಲ ಎಂದು ಬುಶ್ ಆಡಳಿತಕ್ಕೆ ಚೆನ್ನಾಗಿ ಗೊತ್ತಿದೆ. ಎನ್‌ಎಸ್‌ಜಿ ಯಿಂದ ಅನುಮತಿ ದೊರೆಯುವ ವೇಳೆಗೆ ಅಮೆರಿಕನ್ ಕಾಂಗ್ರೆಸ್ ಅದನ್ನು ಪರಿಶೀಲಿಸಿ 123 ಒಪ್ಪಂದವನ್ನು ಅಂಗೀಕರಿಸಲು ತುಂಬ ವಿಳಂಬವಾಗಿರುತ್ತದೆ. ತನ್ನ ಅಧ್ಯಕ್ಷತೆಯ ಕೊನೆಯ ಕೆಲವು ಕಳಂಕಿತ ತಿಂಗಳುಗಳಲ್ಲಿ ಕನಿಷ್ಠ ಈ ಪರಮಾಣು ವ್ಯವಹಾರವಾದರೂ ಮುಂದಿನ ಅಧ್ಯಕ್ಷರು ಕೈಗೆತ್ತಿಕೊಳ್ಳಬಹುದಾದ ತನ್ನ ಒಂದು ಬಳುವಳಿಯಾಗಿ ಇರುತ್ತದೆ ಎಂಬುದು ಆಧ್ಯಕ್ಷ ಬುಶ್‌ರವರ ಬಯಕೆ. ಆತನ ಅಧಿಕಾರಾವದಿ ಮುಗಿಯುವುದರೊಳಗೆ ಎನ್‌ಎಸ್‌ಜಿ ಅನುಮತಿ ಸಿಕ್ಕರೆ ಇದು ಖಂಡಿತವಾಗುತ್ತದೆ. ಅಮೆರಿಕಾ ಹಾಕಿದ ಈ ವೇಳಾಪಟ್ಟಿಯೇ ಪ್ರಧಾನ ಮಂತ್ರಿಗಳು ಪರಿಣಾಮಗಳ ಪರಿವೆಯೇ ಇಲ್ಲದೆ ಮುಂದುವರೆಯುವಂತೆ ಒತ್ತಾಸೆ ನೀಡಿದ್ದು.

ಇಲ್ಲಿ ಅನುಸರಿಸಿದ ತಂತ್ರವೆಂದರೆ ಎಡಪಕ್ಷಗಳು ಚೂರುಚೂರೇ ಒಪ್ಪುವಂತೆ ಪ್ರಯತ್ನಿಸುತ್ತಾ ಹಂತ–ಹಂತವಾಗಿ 123 ಒಪ್ಪಂದವನ್ನು ಕಾರ್ಯಗತಗೊಳಿಸುವುದು. ಒಮ್ಮೆ ಆಡಳಿತಗಾರರ ಮಂಡಳಿಯ ಬಳಿ ಹೋದ ಮೇಲೆ ಸರಕಾರ ಮತ್ತೆ ಮುಂದುವರೆಯುವುದಿಲ್ಲ ಎಂದು ಎಡಪಕ್ಷಗಳಿಗೆ ಹೇಳಲಾಯಿತು. ಇದು ಈ ಹಿಂದೆ ನವೆಂಬರ್ 2007 ರಲ್ಲಿ ಕಾರ್ಯದರ್ಶಿಮಂಡಳಿಯೊಂದಿಗೆ ಮಾತುಕತೆಗಿಂತ ಮುಂದೆ ಹೋಗುವುದಿಲ್ಲ ಎಂಬ ಭರವಸೆಯ ರೀತಿಯದ್ದೇ. ಭಾರತ ಎನ್‌ಎಸ್‌ಜಿ ಯ ಸದಸ್ಯನಲ್ಲ. ಆದ್ದರಿಂದ ಭಾರತ–ಅಮೆರಿಕಾ ಪರಮಾಣು ಸಹಕಾರ ಒಪ್ಪಂದದ ಅಡಿಯಲ್ಲಿ ಅಲ್ಲಿ ಭಾರತದ ಕೆಲಸಕ್ಕೆ ಇತರ ಸದಸ್ಯರನ್ನು ಹೇಗಾದರೂ ಒಪ್ಪಿಸುವ ಜವಾಬ್ದಾರಿ ಅಮೆರಿಕಾದ್ದೇ ಎಂಬುದು ಎಲ್ಲರಿಗೂ ಗೊತ್ತು. ಇದನ್ನು ಪ್ರಧಾನ ಮಂತ್ರಿಗಳು ಮಾರ್ಚ್7, 2006 ರಂದು ಸಂಸತ್ತಿನಲ್ಲಿ ಭಾರತದ ಅಣುಸ್ಥಾವರಗಳನ್ನು ಪ್ರತ್ಯೇಕಗೊಳಿಸುವ ಯೋಜನೆಯ ಬಗ್ಗೆ ನೀಡಿದ ಹೇಳಿಕೆಯಲ್ಲಿ ದೃಢಪಡಿಸಿದ್ದಾರೆ.

ಪರಮಾಣು ಪೂರೈಕೆದಾರರ ಗುಂಪಿನಲ್ಲಿ ಅಮೆರಿಕ ಈಗಾಗಲೇ ಸಮಾಲೋಚನಾ ಪ್ರಕ್ರಿಯೆಯನ್ನು ಆರಂಭಿಸಿದೆ ಎಂಬುದು ವಾಸ್ತವ ಸಂಗತಿ. ಸೆಪ್ಟಂಬರ್ 2007ರಲ್ಲಿ ಬುಶ್ ಆಡಳಿತ 'ಭಾರತದೊಂದಿಗೆ ನಾಗರಿಕ ಪರಮಾಣು ಸಹಕಾರ' ಎಂಬ ನಿರ್ಧಾರಣಾ–ಪೂರ್ವ ಕರಡನ್ನು ಎನ್‌ಎಸ್‌ಜಿ ಯ ಒಂದು ಅನೌಪಚಾರಿಕ ಸಭೆಗೆ ಸಲ್ಲಿಸಿತ್ತು. ನಂತರ ಒಂದು ಪರಿಷ್ಕೃತ ಟಿಪ್ಪಣಿಯನ್ನು ಸಲ್ಲಿಸಲಾಯಿತು ಎಂದು ತಿಳಿದು ಬಂದಿದೆ. ಇತ್ತೀಚೆಗೆ ಮೇ 2008ರಲ್ಲಿ ಅಧಿಕಾರದಿಂದ ಇಳಿದ ಪರಮಾಣು ಪೂರೈಕೆದಾರರ ಗುಂಪಿನ ಮಾಜಿ ಅಧ್ಯಕ್ಷ ಅಬ್ದುಲ್ ಎಸ್ ಮಿಂಟಿ ಹೇಳಿದಂತೆ 'ಎನ್‌ಎಸ್‌ಜಿ ಈ ವಿಷಯವನ್ನು ವಿಧ್ಯುಕ್ತವಾಗಿ ಪರಿಶೀಲಿಸಿಲ್ಲ. ಐಎಇಎ ಯೊಂದಿಗೆ ಸುರಕ್ಷತಾ ಒಪ್ಪಂದ ಪೂರ್ಣಗೊಂಡಿತೆಂದಾಗ ಮಾತ್ರವೇ ಅದು ಈ ವಿಧಾನವನ್ನು ಆರಂಭಿಸಲು ಸಾಧ್ಯ. ಅದು ಹೇಗೆ ನಡೆಯಬಹುದೆಂದರೆ ಅಮೆರಿಕಾ ವಿಧ್ಯುಕ್ತವಾಗಿ ವಿನಾಯ್ತಿಗೆ ಒಂದು ವಿನಂತಿ ಮಾಡಿಕೊಳ್ಳುತ್ತದೆ ಮತ್ತು ಒಮ್ಮೆ ಅದರ ಒಕ್ಕಣಿಕೆ ನಮ್ಮ ಮುಂದೆ ಬಂತೆಂದರೆ ಹಾಗೂ ಆ ಒಕ್ಕಣಿಕೆ ಎನ್‌ಎಸ್‌ಜಿಯ ಎಲ್ಲಾ ಸದಸ್ಯರ ಮೇಲೆ ಏನು ಪರಿಣಾಮ ಬೀರಬಹುದು ಎಂದು ನೋಡಿದ ಮೇಲೆ ಅವರು ತಾವೇನು ಮಾಡಬೇಕು ಎಂದು ತೀರ್ಮಾನಿಸುವ ಸ್ಥಿತಿಯಲ್ಲಿರುತ್ತಾರೆ' (ಎನ್‌ಡಿಟಿವಿ ಯ ವಿಜ್ಞಾನ ಸಂಪಾದಕ ರೊಂದಿಗೆ ಸಂದರ್ಶನದಲ್ಲಿ– ವರದಿ, ಹಿಂದೂ, ಜೂನ್ 14, 2008).

ಐಎಇಎ ಆಡಳಿತ ಮಂಡಳಿಯ ಮಂಜೂರಾತಿ ಪಡೆದಾಗ ಅನೌಪಚಾರಿಕ ಸಮಾಲೋಚನೆಗಳನ್ನು ವಿಧ್ಯುಕ್ತ ಗೊಳಿಸಲಾಗುತ್ತದೆ. ಹೀಗೆ ಪರಮಾಣು ವ್ಯವಹಾರವನ್ನು ಕಾರ್ಯಗತಗೊಳಿಸುವ ಪ್ರಕ್ರಿಯೆಯನ್ನು ಮುಂದೊಯ್ಯಲು ಮಂಡಳಿಯ ಮಂಜೂರಾತಿ ಒಂದು ಅಗತ್ಯ ಹೆಜ್ಜೆ.

ಐಎಇಎ ಮಂಜೂರಾತಿ ರಶ್ಯಾ ಮತ್ತು ಫ್ರಾನ್ಸಿನೊಂದಿಗೆ ಪರಮಾಣು ಸಹಕಾರಕ್ಕೆ ದಾರಿ ತೆರೆಯುತ್ತದೆ ಎಂಬುದನ್ನು ಮನದಲ್ಲಿಟ್ಟುಕೊಂಡು ತೆಗೆದು ಕೊಳ್ಳಲಾಗುತ್ತಿದೆ ಎಂದು ಎಡಪಕ್ಷಗಳಿಗೆ ಮನದಟ್ಟು ಮಾಡಿಸಲು ಯುಪಿಎ ಕಡೆಯವರು ಪ್ರಯತ್ನಿಸಿದರು. 123 ಒಪ್ಪಂದ ಈಗ ಅಜೆಂಡಾದಲ್ಲಿಯೇ ಇಲ್ಲವೇನೋ ಎಂಬ ಪೋಸು ಕೊಡುತ್ತಿದ್ದಾರೆ. ಇದಕ್ಕಿಂತ ಸತ್ಯದೂರವಾದದ್ದು ಬೇರೊಂದಿಲ್ಲ. 123 ಒಪ್ಪಂದವನ್ನು ಬದಿಗೊತ್ತಿ ಭಾರತ ಬೇರೆ ದೇಶಗಳೊಂದಿಗೆ ಪರಮಾಣು ವಾಣಿಜ್ಯದಲ್ಲಿ ತೊಡಗುವಂತಹ ಅತ್ಯಂತ ಕೆಟ್ಟ ಸ್ಥಿತಿ ಏರ್ಪಟ್ಟರೆ ಎನ್‌ಎಸ್‌ಜಿ ಭಾರತಕ್ಕೆ ವಿನಾಯ್ತಿ ಕೊಡದಂತೆ ಅಮೆರಿಕಾ ಮಾಡುತ್ತದೆ ಎಂದು ಅಮೆರಿಕಾದ ಉಪ ವಿದೇಶಾಂಗ ಕಾರ್ಯದರ್ಶಿ ನಿಕೊಲಾಸ್ ಬರ್ನ್ಸ ಫೆಬ್ರುವರಿ 2008 ರಲ್ಲಿ ಖಂಡ ತುಂಡವಾಗಿ ಹೇಳಿದ್ದಾರೆ. ಹೀಗೆ ಈಗ ಪಡೆಯಲು ಪ್ರಯತ್ನಿಸುತ್ತಿರುವ 'ಪಾಸ್ ಪೋರ್ಟ್' 'ಅಮೆರಿಕನ್ ಪಾಸ್‌ಪೋರ್ಟ್' ಅಲ್ಲದೆ ಬೇರೇನೂ ಅಲ್ಲ.

❖ **ಸಂಸತ್ತಿನಲ್ಲಿ ವಿಶ್ವಾಸಮತ ಪಡೆದ ಮೇಲೆಯೇ ಸರಕಾರ ಐಎಇಎಗೆ ಹೋಗುತ್ತದೆ ಎಂದ ಮರುದಿನವೇ ಅದನ್ನು ಐಎಇಎ ಮಂಡಳಿಗೆ ಒಪ್ಪಿಸಿದ ವರದಿ ಪ್ರಕಟವಾಯಿತು. ರಹಸ್ಯ ದಾಖಲೆ ಎಂದು ಎಡಪಕ್ಷಗಳಿಗೆ ನೀಡದ ಸುರಕ್ಷಣಾ ಒಪ್ಪಂದವನ್ನು ಬಹಿರಂಗಗೊಳಿಸಲಾಯಿತು. ಏಕೆ?**

ಜುಲೈ 8ರಂದು ಪತ್ರಿಕಾಸಮ್ಮೇಳನ ಕರೆದ ವಿದೇಶಾಂಗ ವ್ಯವಹಾರಗಳ ಮಂತ್ರಿ ಶ್ರೀ ಪ್ರಣಬ್ ಮುಖರ್ಜಿಯವರು ಸಂಸತ್ತಿನಲ್ಲಿ ವಿಶ್ವಾಸಮತ ಗೆದ್ದರೆ ಮಾತ್ರವೇ ಸರಕಾರ ಭಾರತದ ಸುರಕ್ಷಣಾ ಒಪ್ಪಂದವನ್ನು ಅಂತರ‍್ರಾಷ್ಟ್ರೀಯ ಅಣುಶಕ್ತಿ ಏಜೆಂಸಿಯ ಮಂಡಳಿಗೆ ಕಳಿಸುತ್ತದೆ ಎಂದರು. 'ನಾವು ಬಹುಮತ ಕಳಕೊಂಡರೆ ಸರಕಾರವನ್ನು ಬದ್ಧಗೊಳಿಸುವುದು ನನಗೆ ಸಾಧ್ಯವಿಲ್ಲ' ಎಂದು ಅವರು ಹೇಳಿದರು. ಈ ಬಗ್ಗೆ ಆಗ ಜಪಾನಿನಲ್ಲಿ ಇದ್ದ ಪ್ರಧಾನ ಮಂತ್ರಿಗಳೊಡನೆ ಸಮಾಲೋಚನೆ ನಡೆಸಿದ್ದೇನೆ ಎಂದೂ ಅವರು ಹೇಳಿದರು.

ಎಡಪಕ್ಷಗಳು ಸರಕಾರಕ್ಕೆ ನೀಡಿದ್ದ ಬೆಂಬಲವನ್ನು ಹಿಂತೆಗೆದುಕೊಳ್ಳುವ ನಿರ್ಧಾರವನ್ನು ಪ್ರಕಟಿಸಿದ ಕೆಲವು ಗಂಟೆಗಳ ನಂತರ ಬಂದ ಈ ಹೇಳಿಕೆ ಸರಕಾರ ಸಂಸತ್ತಿನಲ್ಲಿ ತನ್ನ ಬಹುಮತವನ್ನು ಸಿದ್ಧಪಡಿಸುವ ಮೊದಲು ಐಎಇಎ ಆಡಳಿತಗಾರರ ಮಂಡಳಿಯ ಬಳಿ ಹೋಗುವುದಿಲ್ಲ ಎಂಬ ಒಂದು ಗಂಭೀರ ವಚನವಾಗಿತ್ತು. ಆದರೆ ಇಪ್ಪತ್ತ ನಾಲ್ಕು ಗಂಟೆಗಳ ಒಳಗೆ ಭಾರತ ಸರಕಾರದ ಕೇಳಿಕೆಯ ಮೇರೆಗೆ ಒಪ್ಪಂದದ ಕರಡನ್ನು ಮಂಡಳಿಯ ಪರಿಶೀಲನೆಗೆ ಸಲ್ಲಿಸಲಾಗಿದೆ ಎಂದು ಐಎಇಎ ಪ್ರಕಟಿಸಿತು.

ಇದು ಸರಕಾರ ನೀಡಿದ ಭರವಸೆಯ ಒಂದು ನಗ್ನ ಉಲ್ಲಂಘನೆ, ದೇಶಕ್ಕೆ ನೀಡಿದ ಒಂದು ನೈತಿಕ ವಚನದಲ್ಲಿ ಬಗೆದಿರುವ ವಿಶ್ವಾಸದ್ರೋಹ. ಅಧ್ಯಕ್ಷ ಬುಶ್‌ರೊಂದಿಗೆ ನಡೆದ

ಪ್ರಧಾನ ಮಂತ್ರಿಗಳ ಭೇಟಿಯಲ್ಲಿ ಈ ಸಾರ್ವಜನಿಕ ಪ್ರತಿಜ್ಞೆಯನ್ನು ಮುರಿಯುವಂತಹದ್ದೇನು ನಡೆಯಿತು? ಪ್ರಧಾನ ಮಂತ್ರಿಗಳು ಜನತೆಗೆ ಮತ್ತು ದೇಶಕ್ಕೆ ಉತ್ತರ ಕೊಡಬೇಕಾಗಿದೆ ಎಂದು ಎಡಪಕ್ಷಗಳು ಹೇಳಿದವು

ಒಪ್ಪಂದದ ಪಠ್ಯವನ್ನು ಗೋಪ್ಯವಾಗಿಟ್ಟಿರುವುದು ಭಾರತ ಸರಕಾರವೇ ಹೊರತು, ಐಎಇಎ ಅಲ್ಲ ಎಂದು ಎಡಪಕ್ಷಗಳು ಜುಲೈ 8, 2008 ರಂದು ಹೇಳಿದ್ದವು. ಇದನ್ನು ಈಗ ಐಎಇಎ ವಕ್ತಾರರು ದೃಢಪಡಿಸಿದ್ದಾರೆ.

123 ಒಪ್ಪಂದದಲ್ಲಿ ಪಡೆಯಲಾಗದ ಅಬಾಧಿತ ಇಂಧನ ಪೂರೈಕೆ ಮತ್ತು ಇತರ ಸರಿಪಡಿಕೆ ಕ್ರಮಗಳಿಗೆ ಅವಕಾಶ ಮಾಡಿಕೊಳ್ಳಲು ಐಎಇಎ ಯೊಂದಿಗೆ ಸುರಕ್ಷಣಾ ಒಪ್ಪಂದದ ಮಾತುಕತೆ ನಡೆಸಬೇಕಾಗುತ್ತದೆ ಎಂದು ಯುಪಿಎ-ಎಡಪಕ್ಷಗಳ ಸಮಿತಿಯಲ್ಲಿ ಸರಕಾರ ಹೇಳಿತು. ಈ ನ್ಯೂನ್ಯತೆಯನ್ನು ಐಎಇಎ ಪರಿಹರಿಸಲು ಸಾಧ್ಯವೇ ಎಂದು ಎಡಪಕ್ಷಗಳಿಗೆ ಸಂದೇಹವಿತ್ತು.

ಯುಪಿಎ ಮಾತುಕತೆಗಳ ಮೂಲಕ ರೂಪಿಸಿದ ಈ ಒಪ್ಪಂದದ ಪಠ್ಯವನ್ನು ನಾಲ್ಕು ತಿಂಗಳುಗಳ ಕಾಲ ತೋರಿಸಲು ನಿರಾಕರಿಸಿ ಈಗ ಐಎಇಎ ಆಡಳಿತ ಮಂಡಳಿಗೆ ಸಲ್ಲಿಸಿದ ಮೇಲೆ ಅದನ್ನು ಸಾರ್ವಜನಿಕಗೊಳಿಸಿದೆ. ಏಕೆ ಇದುವರೆಗೆ ಅದನ್ನು ಜನರಿಂದ ಅಡಗಿಸಿಟ್ಟಿತ್ತು ಎಂಬುದು ಈಗ ಸ್ಪಷ್ಟವಾಗಿದೆ. ಭಾರತ ಈ ಮೂಲಕ, ಅಬಾಧಿತ ಇಂಧನ ಪೂರೈಕೆ ಕುರಿತಂತೆ, ಇಂಧನ ಪೂರೈಕೆ ನಿಲ್ಲಿಸಲ್ಪಟ್ಟರೆ ಸರಿಪಡಿಕೆ ಕ್ರಮಗಳನ್ನು ಕೈಗೊಳ್ಳುವ ಹಕ್ಕನ್ನು ಕುರಿತಂತೆ ಯಾವುದೇ ನಿರ್ದಿಷ್ಟ ಭರವಸೆಗಳನ್ನು ಪಡೆಯದೆಯೇ ತನ್ನ ಸಮಸ್ತ ನಾಗರಿಕ ಪರಮಾಣು ಶಕ್ತಿ ಕಾರ್ಯಕ್ರಮವನ್ನು ಶಾಶ್ವತವಾಗಿ ಐಎಇಎ ಯ ಸುರಕ್ಷಣಾ ಶರತ್ತುಗಳಿಗೆ ಒಪ್ಪಿಸ ಹೊರಟಿದೆ ಎಂಬ ಸಂಗತಿಯನ್ನು ಮರೆಮಾಚಲೆಂದೇ ಹೀಗೆ ಮಾಡಲಾಯಿತು ಎಂಬುದು ಈಗ ಜಗಜ್ಜಾಹೀರಾಗಿದೆ.

## ❖ ಕೊನೆಗೂ ಪ್ರಕಟಗೊಂಡ ಸುರಕ್ಷಣಾ ಒಪ್ಪಂದ ಪ್ರಧಾನ ಮಂತ್ರಿಗಳು ಸಂಸತ್ತಿಗೆ ನೀಡಿದ ಭರವಸೆಗಳನ್ನು ಈಡೇರಿಸಿದೆಯೇ?

ಜುಲೈ 9, 2008ರಂದು ಐಎಇಎ ಆಡಳಿತಗಾರರ ಮಂಡಳಿಗೆ ಭಾರತ ಸರಕಾರ ಕಳಿಸಿದ 'ನಾಗರಿಕ ಪರಮಾಣು ಸೌಲಭ್ಯಗಳಿಗೆ ಸುರಕ್ಷಣೆಗಳ ಅನ್ವಯ' ಕುರಿತಾದ ಒಪ್ಪಂದದ ಕರಡು ಅಬಾಧಿತ ಇಂಧನ ಪೂರೈಕೆಯ ಭರವಸೆಗಳು ಮತ್ತು ಇಂಧನ ಭಂಡಾರ ಕುರಿತು ಯುಪಿಎ ಸರಕಾರ ಸಂಸತ್ತಿನ ಒಳಗೂ, ಹೊರಗೂ ನೀಡಿದ ಆಶ್ವಾಸನೆಗಳನ್ನು ಈಡೇರಿಸಿಲ್ಲ. ಒಪ್ಪಂದದ ಪೀಠಿಕೆಯಲ್ಲಿ 'ಸರಿಪಡಿಕೆ ಕ್ರಮಗಳ' ಬಗ್ಗೆ ಅಸ್ಪಷ್ಟ ಪ್ರಸ್ತಾಪ ಬಿಟ್ಟರೆ, ಒಪ್ಪಂದದಲ್ಲಿ ಜಾರಿ ಮಾಡಬಹುದಾದ ಪ್ರಧಾನ ಭಾಗದಲ್ಲಿ ಏನೂ ಇಲ್ಲ. ಇದು ಅನಿರೀಕ್ಷಿತವೇನಲ್ಲ.

ಅಮೆರಿಕಾ ಅಥವಾ ಇತರ ಪರಮಾಣು ಪೂರೈಕೆದಾರ ದೇಶಗಳು ಆಮದು ಮಾಡಿಕೊಂಡ ಅಣು ರಿಯಾಕ್ಟರುಗಳಿಗೆ ಇಂಧನ ನೀಡಲು ನಿರಾಕರಿಸಿದರೆ ಅವನ್ನು ಈ ಸುರಕ್ಷಣಾ ಒಪ್ಪಂದದಿಂದ ಮುಕ್ತಗೊಳಿಸಬಹುದೇ, ಅದೇ ರೀತಿ ದೇಶೀ ನಾಗರಿಕ ರಿಯಾಕ್ಟರುಗಳಿಗೂ ಇಂಧನ ಪೂರೈಕೆ ನಿಲ್ಲಿಸಿದರೆ ಅವನ್ನೂ ಇದರಿಂದ ಮುಕ್ತಗೊಳಿಸಬಹುದೇ. ಈ ಸ್ಥಾವರಗಳಿಗೆ ಇಂತಹ 'ಸುರಕ್ಷಣೆ' ಗೆ ಒಳಗಾಗದ ನಮ್ಮ

ಪರಮಾಣು ಕಾರ್ಯಕ್ರಮದ ಸ್ಥಾವರಗಳಿಂದ ಇಂತಹ ಸಂದರ್ಭಗಳಲ್ಲಿ ಪರಮಾಣು ಇಂಧನ ತಂದರೆ ಅವನ್ನು ಮತ್ತೆ ಹಿಂದಕ್ಕೆ ಒಯ್ಯಲು ಸಾಧ್ಯವೇ, ಇಂತಹ ಸಂದರ್ಭಗಳಲ್ಲಿ ಭಾರತ ಕೈಗೊಳ್ಳಬಹುದಾದ ಸರಿಪಡಿಕೆ ಕ್ರಮಗಳೇನು ಹಾಗೂ ಈ ಕ್ರಮಗಳನ್ನು ಕಾರ್ಯಗತಗೊಳಿಸಬೇಕಾದರೆ ಭಾರತ ಪಾಲಿಸಬೇಕಾದ ಶರತ್ತುಗಳೇನು ಎಂಬ ಬಗ್ಗೆ ಎಡಪಕ್ಷಗಳು ಕೇಳಿದ್ದವು. ಈಗ ಸಾರ್ವಜನಿಕಗೊಳಿಸಿದ ಒಪ್ಪಂದದ ಕರಡಿನಲ್ಲಿ ಈ ಪ್ರಶ್ನೆಗಳಿಗೆ ಉತ್ತರ ದೊರೆತಿಲ್ಲ .

ಈ ಒಪ್ಪಂದದ ಪ್ರಕಾರ ಇದರ ವ್ಯಾಖ್ಯೆಯಲ್ಲಿ ಯಾವುದೇ ವಿವಾದ ಬಂದರೆ ಐಎಇಎ ಯ ತೀರ್ಪೇ ಅಂತಿಮ. ಭಾರತದ ಪ್ರಕಾರ ಅದು ಸರಿಯಲ್ಲದಿದ್ದರೂ ಅದನ್ನು ಒಪ್ಪಿಕೊಳ್ಳಬೇಕು, ಭಾರತ ಒಪ್ಪಂದದ ಯಾವುದೇ ಅಂಶವನ್ನು ಪಾಲಿಸುತ್ತಿಲ್ಲ ಎಂದು ಆಡಳಿತ ಮಂಡಳಿ ಬಗೆದರೆ ಸಾಕು, ವಿಶ್ವ ಸಂಸ್ಥೆಯ ಭದ್ರತಾಸಮಿತಿಗೆ ತಿಳಿಸಿದರೆ ನಿರ್ಬಂಧವೂ ಸೇರಿದಂತೆ ಯಾವುದೇ ಶಿಕ್ಷೆಗೆ ಒಳಗಾಗಬೇಕು.

ಇರಾನ್ ಇದಕ್ಕೆ ಇತ್ತೀಚಿನ ಉದಾಹರಣೆ. ಭಾರತವೂ ಸೇರಿದಂತೆ ಹಲವು ದೇಶಗಳು ಇರಾನಿಗೆ ತನ್ನ ಇಂಧನ ಆವೃತ್ತವನ್ನು ನಿರ್ಧರಿಸುವ ಹಕ್ಕು ಇದೆ ಎಂದು ಅನುಮೋದಿಸಿದರೂ ಅಮೆರಿಕಾದ ಒತ್ತಡದಿಂದ ಐಎಇಎ ಆಡಳಿತ ಮಂಡಳಿ ಅದು ಉಲ್ಲಂಘನೆಯೆಂದು ಭದ್ರತಾಸಮಿತಿಗೆ ಒಪ್ಪಿಸಿತು.

ಭಾರತ ಯಾವ ಸಂದರ್ಭದಲ್ಲಿ ಈ ಒಪ್ಪಂದಕ್ಕೆ ಒಳಗಾಗುತ್ತಿದೆ ಎಂಬುದನ್ನು ತಿಳಿಸುವ ಪೀಠಿಕೆಯನ್ನು ಬಿಟ್ಟರೆ ಉಳಿದೆಲ್ಲಾ ಅಂಶಗಳಲ್ಲಿ ಇದು ಅಣು ಪ್ರಸರಣ ನಿಷೇಧ ಸಂಧಿ(Treaty) ಯ ಪ್ರಕಾರ ಪರಮಾಣು ಶಸ್ತ್ರಾಸ್ತ್ರವಿಲ್ಲದ ಪ್ರಭುತ್ವಗಳು ಎಂದು ಪರಿಗಣಿಸಲ್ಪಡುವ ದೇಶಗಳಿಗೆ ಅನ್ವಯವಾಗುವ ಮಾದರಿ ಒಪ್ಪಂದದಂತೆಯೇ ಇದೆ ಎಂದು ಪರಿಣಿತರೂ ಅಭಿಪ್ರಾಯ ಪಟ್ಟಿದ್ದಾರೆ. ಅಂದರೆ ಈ ಒಪ್ಪಂದಕ್ಕೆ ಒಳಪಡುವ ಸೌಲಭ್ಯಗಳನ್ನು ಕುರಿತಂತೆ ಭಾರತಕ್ಕೆ ವಿಶೇಷ ಹಕ್ಕುಗಳೇನೂ ಇರುವುದಿಲ್ಲ ಎಂಬುದು ಸ್ಪಷ್ಟ. ಇದು ಪ್ರಧಾನ ಮಂತ್ರಿಗಳು ಸಂಸತ್ತಿಗೆ ನೀಡಿದ ಭರವಸೆಗಳಿಗೆ ಸಂಪೂರ್ಣವಾಗಿ ವ್ಯತಿರಿಕ್ತವಾದ ಸಂಗತಿ ಎಂದು ಎಡಪಕ್ಷಗಳು ಆಕ್ಷೇಪಿಸಿವೆ.

ಒಟ್ಟಿನಲ್ಲಿ ಕೊನೆಗೂ ಬಯಲಾದ ಐಎಇಎ ಸುರಕ್ಷಣಾ ಒಪ್ಪಂದವು ಹೈಡ್ ಆಕ್ಟ್ ಮತ್ತು 123 ಒಪ್ಪಂದದ ಯಾವುದೇ ಮೂಲಭೂತ ಸಮಸ್ಯೆಗಳಿಗೆ ಪರಿಹಾರ ನೀಡಿಲ್ಲ. ಆದ್ದರಿಂದ ಪ್ರಧಾನ ಮಂತ್ರಿಗಳು ಬಯಸುವಂತೆ ಭಾರತ– ಅಮೆರಿಕಾ ಪರಮಾಣು ವ್ಯವಹಾರವನ್ನು ಕಾರ್ಯಗತಗೊಳಿಸಿದರೆ , ಭಾರತ ತನ್ನ ವೆಚ್ಚದಾಯಕ ಆಮದು ಮಾಡಲ್ಪಟ್ಟ ರಿಯಾಕ್ಟರುಗಳನ್ನು ಶಾಶ್ವತವಾಗಿ ಐಎಇಎ ಯ ಸುರಕ್ಷಣಾ ಕ್ರಮಗಳಿಗೆ ಒಳಪಡಿಸಬೇಕಾಗುತ್ತದೆ; ವಿದೇಶಾಂಗ ನೀತಿಯು ಪ್ರಶ್ನೆಗಳಲ್ಲಿ ಅಮೆರಿಕಾದ ಬಾಲಂಗೋಚಿಯಾಗಲು ನಿರಾಕರಿಸಿದರೆ ಇವನ್ನೆಲ್ಲಾ ಶಾಶ್ವತವಾಗಿ ಮುಚ್ಚಬೇಕಾದ ಪರಿಸ್ಥಿತಿ ಬರಬಹುದು. ಪೋಖ್ರಾನ್ ಸ್ಫೋಟದ ನಂತರ ತಾರಾಪುರ ಅಣುಸ್ಥಾವರದಲ್ಲಿ ನಮಗೆ ಇಂತಹ ಅನುಭವ ಆಗಿದೆ. ಆದ್ದರಿಂದ ಈ ಒಪ್ಪಂದದ ದಾರಿಯಲ್ಲಿ ಮುಂದುವರೆಯುವುದು ಭಾರತದ ಹಿತಾಸಕ್ತಿಗಳಿಗೆ ಹಾನಿಕಾರಕ ಎಂಬುದು ಈಗ ಇನ್ನಷ್ಟು ಸ್ಪಷ್ಟವಾಗಿದೆ.



## ಪೋಖ್ರಾನ್ ಸ್ಫೋಟದ ನಂತರ ತಾರಾಪುರ ಅಣುಸ್ಥಾವರದಲ್ಲಿ ನಮಗೆ ಆಗಿರುವ ಇಂತಹ ಅನುಭವ ಏನು?

ಈ ಮೊದಲು ಹೇಳಿದಂತೆ ಹಿಂದೆ ಅಗಸ್ಟ್ 1963ರಲ್ಲಿ ಭಾರತ ಮತ್ತು ಅಮೆರಿಕಾ ನಡುವೆ ಮೊದಲ ಪರಮಾಣು ಸಹಕಾರ ಒಪ್ಪಂದ ನಡೆಯಿತು. ಇದರ ಪ್ರಕಾರ ಮಹಾರಾಷ್ಟ್ರದ ತಾರಾಪುರದಲ್ಲಿ 200 ಮೆಗಾವಾಟ್ ಸಾಮರ್ಥ್ಯದ ಎರಡು ಪರಮಾಣು ವಿದ್ಯುತ್ ಸ್ಥಾವರಗಳನ್ನು ಸ್ಥಾಪಿಸಲು ಅಮೆರಿಕಾ ಭಾರತಕ್ಕೆ ನೆರವು ನೀಡಲು ಒಪ್ಪಿತು. 30 ವರ್ಷಗಳ ಈ ಒಪ್ಪಂದಕ್ಕೆ ಇದ್ದ ಶರತ್ತುಗಳೆಂದರೆ ಈ ಎರಡು ಸ್ಥಾವರಗಳನ್ನು ಅಂತರ್ರಾಷ್ಟ್ರೀಯ ಅಣುಶಕ್ತಿ ಏಜೆಂಸಿ (IAEA)ಯ ತಪಾಸಣೆಗೆ ಒಳಪಡಿಸಬೇಕು, ಇದರಲ್ಲಿ ಅಮೆರಿಕಾ ಒದಗಿಸುವ ಯುರೇನಿಯಂನ್ನು ಮಾತ್ರವೇ ಬಳಸಬೇಕು ಹಾಗೂ ಬಳಸಿದ ಇಂಧನವನ್ನು ಮರುಸಂಸ್ಕರಣೆ ಮಾಡುವಾಗ ಪ್ಲುಟೋನಿಯಂನ್ನು ಬೇರ್ಪಡಿಸಿ ಸಂಗ್ರಹಿಸಿಟ್ಟು ಕೊಳ್ಳಲು ಅಮೆರಿಕಾದ ಒಪ್ಪಿಗೆ ಪಡೆಯಬೇಕು.

ಅಮೆರಿಕಾದ ಬೆಕ್ಟೆಲ್ ಮತ್ತು ಜನರಲ್ ಎಲೆಕ್ಟ್ರಿಕ್ ಕಂಪನಿಗಳು ಇದನ್ನು ನಿರ್ಮಿಸಿಕೊಟ್ಟವು. ಇದಕ್ಕೆ ಅಮೆರಿಕಾದ 8ಕೋಟಿ ಡಾಲರುಗಳ ಸಾಲವನ್ನು ಪಡೆಯಲಾಯಿತು.

ಈ ನಡುವೆ 1974 ರಲ್ಲಿ ಭಾರತ ತನ್ನ ಮೊದಲ ಅಣ್ವಸ್ತ್ರ ಪರೀಕ್ಷಣೆ ನಡೆಸಿತು. ಮುಂದುವರೆದ ದೇಶಗಳಿಂದ ಇದಕ್ಕೆ ತೀಕ್ಷ್ಣ ಪ್ರತಿಕ್ರಿಯೆಗಳು ಬಂದವು. ಇದು ಅಮೆರಿಕಾದೊಂದಿಗೆ ಪರಮಾಣು ಒಪ್ಪಂದದ ಉಲ್ಲಂಘನೆಯೇನೂ ಆಗಿರಲಿಲ್ಲ. ಆದ್ದರಿಂದ ಅಮೆರಿಕಾ ಇಂಧನ ಮತ್ತು ಬಿಡಿಭಾಗಗಳ ಪೂರೈಕೆಯನ್ನು ಮುಂದುವರೆಸಿತು.

ಆದರೆ 1978ರಲ್ಲಿ ಅಮೆರಿಕಾ ಒಂದು ಅಣುಪ್ರಸರಣ ನಿಷೇಧ ಕಾನೂನನ್ನು ಅಂಗೀಕರಿಸಿದ ಮೇಲೆ ಸಮಸ್ಯೆ ಆರಂಭವಾಯಿತು. ವಾಸ್ತವವಾಗಿ ಈ ಸಹಕಾರ ಒಪ್ಪಂದ ಅದಕ್ಕಿಂತ 15 ವರ್ಷ ಮೊದಲೇ ಆಗಿತ್ತು. ಮತ್ತು 1978ರ ಕಾನೂನು ಅಂತರ್ರಾಷ್ಟ್ರೀಯ ಕಾನೂನೇನೂ ಆಗಿರಲಿಲ್ಲ. ಅಮೆರಿಕಾದ ಆಂತರಿಕ ಕಾನೂನಷ್ಟೇ ಆಗಿತ್ತು. ಆದರೂ ಪರಮಾಣು ಸಾಮಗ್ರಿ ಒದಗಿಸುವುದರಲ್ಲಿ ಅಮೆರಿಕಾ ವಿಳಂಬ ಮಾಡಲಾರಂಭಿಸಿತು. ನಂತರ ಅಮೆರಿಕಾದ ಪರಮಾಣು ನಿಯಂತ್ರಣ ಆಯೋಗ ತಾರಾಪುರಕ್ಕೆ ಪೂರೈಕೆಯಾಗುತ್ತಿದ್ದ ಸಾಮಗ್ರಿಗಳನ್ನು ತಡೆ ಹಿಡಿಯಿತು. ಈ ವೇಳೆಗೆ ಅಂತರ್ರಾಷ್ಟ್ರೀಯವಾಗಿಯೂ ಪ್ರಸರಣ ನಿಷೇಧ ಸಂಧಿ (ಎನ್‌ಪಿಟಿ) ಬಂದಿತ್ತು. ಅಮೆರಿಕಾದ ಅಧ್ಯಕ್ಷ ಕಾರ್ಟರ್ 1980ರ ಹೊತ್ತಿಗೆ ಭಾರತ ಈ ಸಂಧಿಗೆ ಸಹಿಹಾಕುವಂತೆ ಮಾಡುತ್ತೇನೆ ಎಂದು ಅಮೆರಿಕನ್ ಕಾಂಗ್ರೆಸ್‌ಗೆ ಹೇಳಿದುದರಿಂದ ಪರಮಾಣು ಸಾಮಗ್ರಿ ಪೂರೈಕೆ ಸ್ವಲ್ಪ ಮಟ್ಟಿಗೆ ಮತ್ತೆ ಆರಂಭವಾಯಿತು.

ಆದರೆ ಭಾರತ ಎನ್‌ಪಿಟಿ ಗೆ ಸಹಿ ಹಾಕುವುದಿಲ್ಲವೆಂದು ಕಂಡುಬಂದಾಗ ಎಲ್ಲಾ ಪೂರೈಕೆಗಳನ್ನು ಅದು ನಿಲ್ಲಿಸಿತು, ನಿರ್ಬಂಧಗಳನ್ನು ಹೇರಿತು. ಈ ಒಪ್ಪಂದಕ್ಕೆ ಇನ್ನೂ 10 ವರ್ಷಗಳಿದ್ದರೂ ಭಾರತ ಯಾವುದೇ ಶರತ್ತಿನ ಉಲ್ಲಂಘನೆ ಮಾಡಿರದಿದ್ದರೂ ಏಕಪಕ್ಷೀಯವಾಗಿ ಈ ಒಪ್ಪಂದವನ್ನು ಕೊನೆಗೊಳಿಸಲಾಯಿತು. ಅಗಿನ ಸೋವಿಯತ್ ಒಕ್ಕೂಟ ಆಗ ಇಂಧನ ಪೂರೈಸಿ ಭಾರತದ ನೆರವಿಗೆ ಬಂದುದರಿಂದ ಹಾಗೂ ನಮ್ಮ ವಿಜ್ಞಾನಿಗಳ ಪರಿಶ್ರಮದಿಂದ ಈ ಅಣುಸ್ಥಾವರಗಳನ್ನು ಪೂರ್ಣವಾಗಿ ಮುಚ್ಚುವ ಪರಿಸ್ಥಿತಿ ಬರಲಿಲ್ಲ ಎಂಬುದು ಬೇರೆ ಮಾತು.

ಹೈಡ್ ಆಕ್ಟ್ ಅಮೆರಿಕಾದ ಆಂತರಿಕ ಕಾಯ್ದೆಯಾದುದರಿಂದ ಅದನ್ನು 123 ಒಪ್ಪಂದಕ್ಕೆ ತಳಕು ಹಾಕಿ ಇದನ್ನು ವಿರೋಧಿಸಬಾರದು ಎನ್ನುವವರು ಇದನ್ನು ಗಮನಿಸಬೇಕಾಗಿದೆ.

❖ **ಮಾಜಿ ರಾಷ್ಟ್ರಪತಿಗಳೂ, ಸ್ವತಃ ತಂತ್ರಜ್ಞರೂ ಆದ ಡಾ. ಅಬ್ದುಲ್ ಕಲಾಂ ರವರೂ ಈ ಒಪ್ಪಂದ ರಾಷ್ಟ್ರಕ್ಕೆ ಅಗತ್ಯವಾಗಿದೆ ಎಂದಿದ್ದಾರಲ್ಲ?**

ಅದೇ ವೇಳೆಗೆ ದೇಶದ ಮೂವರು ಹಿರಿಯ ಪರಮಾಣು ವಿಜ್ಞಾನಿಗಳು, ಅಣುಶಕ್ತಿ ಆಯೋಗದ ಮಾಜಿ ಅಧ್ಯಕ್ಷ ಡಾ.ಪಿ.ಕೆ.ಅಯ್ಯಂಗಾರ್, ಅಣುಶಕ್ತಿ ನಿಯಂತ್ರಣ ಪ್ರಾಧಿಕಾರದ ಮಾಜಿ ಅಧ್ಯಕ್ಷ ಡಾ.ಎ. ಗೋಪಾಲಕೃಷ್ಣನ್ ಮತ್ತು ಭಾಭಾ ಅಣುಶಕ್ತಿ ಕೇಂದ್ರದ ಮಾಜಿ ನಿರ್ದೇಶಕ ಡಾ. ಎ.ಎಸ್.ಪ್ರಸಾದ್ ಸರಕಾರ ಸುರಕ್ಷಣಾ ಒಪ್ಪಂದದ ಮಂಜೂರಾತಿಗಾಗಿ ಐಎಇಎ ಆಡಳಿತ ಮಂಡಳಿಯ ಬಳಿ ಹೋಗುವುದನ್ನು ವಿರೋಧಿಸಿದ್ದಾರೆ ಎಂಬುದನ್ನೂ ಗಮನಿಸಬೇಕು. ಈ ಹಿರಿಯ ವಿಜ್ಞಾನಿಗಳು 123 ಒಪ್ಪಂದಕ್ಕೆ ಸಹಿ ಹಾಕಿದಾಗಲೂ ಇತರ ಪರಮಾಣು ವಿಜ್ಞಾನಿಗಳೊಡಗೂಡಿ ಈ ಒಪ್ಪಂದದ ಬಗ್ಗೆ, ಹೈಡ್ ಆಕ್ಟ್‌ನ ಪ್ರಭಾವದ ಬಗ್ಗೆ ಆತಂಕ ವ್ಯಕ್ತಪಡಿಸಿದ್ದರು. ಎಲ್ಲಾ ಸಂಸತ್ ಸದಸ್ಯರಿಗೆ ಈ ಕುರಿತು ಪತ್ರ ಬರೆದಿದ್ದರು ಹಾಗೂ ಪ್ರಧಾನ ಮಂತ್ರಿಗಳನ್ನು ಭೇಟಿ ಮಾಡಿ ತಮ್ಮ ಆತಂಕಗಳನ್ನು ವ್ಯಕ್ತಪಡಿಸಿದ್ದರು.

ಜೂನ್ 24, 2008 ರಂದು ಈ ಮೂವರು ಪರಮಾಣು ತಜ್ಞರು ನೀಡಿದ ಹೇಳಿಕೆಯಲ್ಲಿ ಕರಡು ಸುರಕ್ಷಣಾ ಒಪ್ಪಂದದ ಪರಿಣಾಮಗಳ ಬಗ್ಗೆ ಸರಕಾರ ತಾವೇ ರಚಿಸಿದ ಯುಪಿಎ–ಎಡಪಕ್ಷಗಳ ಸಮಿತಿಯಲ್ಲಿ ಪೂರ್ಣವಾಗಿ ಚರ್ಚಿಸದೆ ಅಥವಾ ಐಎಇಎ ಮಾತುಕತೆಗಳಲ್ಲಿ ಭಾಗಿಯಾಗಿರದ ಒಂದು ತಜ್ಞರ ಗುಂಪಿನೊಂದಿಗಾದರೂ ಚರ್ಚಿಸದೆ ಐಎಇಎ ಮಂಜೂರಾತಿಗಾಗಿ ಮುಂದೆ ಹೋಗಬಾರದು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಇದಕ್ಕೆ ಕಾರಣಗಳನ್ನು ಅವರು ವಿವರಿಸಿದ್ದಾರೆ.

ಒಪ್ಪಂದ ಒಮ್ಮೆ ಜಾರಿಗೆ ಬಂದರೆ ಅಮೇರಿಕಾ ಅಥವಾ ಇತರ ಯಾವುದೇ ದೇಶದೊಂದಿಗಿನ ಭಾರತದ ಪರಮಾಣು ಸಂಬಂಧಿ ವಾಣಿಜ್ಯ ವ್ಯವಹಾರಗಳು ವಾಷಿಂಗ್‌ಟನ್ (ಅಮೇರಿಕಾ) ನಿಂದಲೇ ನಿಯಂತ್ರಿಸಲ್ಪಡುತ್ತವೆ ಎಂದು ಅವರು ಎಚ್ಚರಿಸಿದ್ದಾರೆ.

ಹೀಗಾಗಿ ನಮ್ಮ ಮುಂದಿರುವ ನಿಜವಾದ ಪ್ರಶ್ನೆ ಎಂದರೆ ಸಾಂಪ್ರದಾಯಿಕವಾದ ವಿದ್ಯುತ್ ಉತ್ಪಾದನಾ ವೆಚ್ಚಕ್ಕಿಂತ ಮೂರುಪಟ್ಟು ದುಬಾರಿಯಾದ ಈ ಆಮದು ಅಣು ವಿದ್ಯುತ್ ನಮಗೆ ಬೇಕೆ? ಅದೂ ಕೂಡ ಭಾರತ ಸ್ವತಂತ್ರ ವಿದೇಶಾಂಗ ನೀತಿಯನ್ನು ಅನುಸರಿಸುವ ಸ್ವಾತಂತ್ರ್ಯವನ್ನು ಕಳೆದುಕೊಂಡು, ತಾನು ದೇಶೀಯವಾಗಿ ಅಣು ವಿಜ್ಞಾನವನ್ನು ಅಭಿವೃದ್ಧಿ ಪಡಿಸುವ, ಸಂಶೋಧನೆ ಕೈಗೊಳ್ಳುವ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡು ಇಂತಹ ವಿದ್ಯುತನ್ನು ಪಡೆದುಕೊಳ್ಳಬೇಕೇ ಎಂಬುದಾಗಿದೆ. ಅದೂ ಅಲ್ಲದೆ ಈ ಹೆಚ್ಚುವರಿ 'ಇಂಧನ ಭದ್ರತೆ' ಎಂದು ಹೇಳಲಾಗುತ್ತಿರುವುದೂ ಕೂಡ ಒಂದು ಮಿಥ್ಯೆ ಎಂದು ಅವರು ಹೇಳಿದ್ದಾರೆ.

ಹೈಡ್ ಕಾಯ್ದೆ ಮಾತ್ರವೇ ಅಲ್ಲ. ಅಣು ಸುರಕ್ಷತಾ ನಿರ್ಬಂಧಗಳಿಗೆ ಭಾರತವನ್ನು ಒಡ್ಡುವ 123 ಒಪ್ಪಂದ ಕೂಡ ಭಾರತಕ್ಕೆ ತಡೆ ರಹಿತವಾದ ಅಣು ಇಂಧನ ಸರಬರಾಜನ್ನೇನು ಖಾತರಿ ಪಡಿಸುವುದಿಲ್ಲ. ಸರ್ಕಾರವು ಐಎಇಎಯೊಂದಿಗಿನ ಸುರಕ್ಷಣಾ ಒಪ್ಪಂದದಲ್ಲಿನ ದೋಷವನ್ನು ಸರಿಪಡಿಸುವುದಾಗಿ ಭರವಸೆ ನೀಡುತ್ತಿದ್ದರೂ ಸಹ ಈ 'ಐಎಇಎ'ಯು

ಅಣು ಇಂಧನ ಪೂರೈಕೆಯನ್ನು ಖಾತ್ರಿ ಮಾಡುವ ಸಂಸ್ಥೆಯಲ್ಲ ಎಂಬುದನ್ನು ನೆನಪಿಡಬೇಕು. ಆದ್ದರಿಂದ ಭಾರತದ ಪರವಾಗಿ ಮಾತುಕತೆಗೆ ತೆರಳಿದವರು ಈ ವಿಷಯದಲ್ಲಿ ಐಎಇಎಯಿಂದ ಭರವಸೆ ಪಡೆದಿರುವ ಬಗೆಗೆ ಕೂಡ ಗಂಭೀರವಾದ ಅನುಮಾನಗಳಿವೆ. ಮುಂದೆ ಒಂದೊಮ್ಮೆ ಅಣು ಇಂಧನ ಪೂರೈಕೆಯಲ್ಲಿ ತಡೆ ಉಂಟಾದಲ್ಲಿ ಅದನ್ನು ಎದುರಿಸುವ ಬಗೆಗೆ, ಸರಿಪಡಿಸುವ ಬಗೆಗೆ 123 ಒಪ್ಪಂದದಂತೆ ತೆಗೆದುಕೊಳ್ಳಲಾಗುವ ಪರಿಹಾರದ ಕ್ರಮಗಳೇನು ಎಂಬುದನ್ನು ಸರ್ಕಾರವು ಬಹಿರಂಗಪಡಿಸಬೇಕು ಎಂದು ಅವರು ಕೇಳಿದ್ದಾರೆ.

ಭಾರತದಲ್ಲಿನ ದೇಶೀಯ ಅಣು ಸ್ಥಾವರಗಳಲ್ಲಿ ವಿದೇಶಿ ಮೂಲದ ಇಂಧನ ಮತ್ತು ಉಪಕರಣಗಳನ್ನು ಕಸಿದುಕೊಂಡು ಆನಂತರ ಅದಕ್ಕೆ ಸುರಕ್ಷತಾ ಕ್ರಮಗಳಿಂದ ರಿಯಾಯಿತಿ ನೀಡುವುದರಿಂದೇನೂ ಅಣು ಇಂಧನದ ನಿರಂತರ ಪೂರೈಕೆಯನ್ನು ಖಾತ್ರಿಪಡಿಸಿದಂತಾಗುವುದಿಲ್ಲ ಮತ್ತು ಇಂತಹ ಸುರಕ್ಷಣಾ ಕ್ರಮಗಳ ವಿನಾಯಿತಿಯು ಭಾರತದ ಬಹುದೊಡ್ಡ ಬಂಡವಾಳವನ್ನು ತೊಡಗಿಸಿ ಸ್ಥಾಪಿಸಲಾಗುವ ವಿದೇಶದಿಂದ ಆಮದಾದ ಅಣುಸ್ಥಾವರಕ್ಕೆ ಅನ್ವಯವಾಗುವುದಿಲ್ಲ. ಭಾರತಕ್ಕೆ ನಿರ್ದಿಷ್ಟವಾದ ಸುರಕ್ಷಣಾ ಒಪ್ಪಂದದ ಜೊತೆಗೆ ಈ ವಿಚಾರದ ಕುರಿತು ಸಹ ಮಾತುಕತೆ ನಡೆಸಬೇಕು ಎಂಬುದು ಅವರ ಅಭಿಪ್ರಾಯ.

ಆಮದಾದ ಇಂಧನವನ್ನು ಉರಿಸಿದಾಗ ಸಿಗುವ ಬಳಸಿದ ಇಂಧನವನ್ನು ಮರು ಸಂಸ್ಕರಿಸಿ ಭವಿಷ್ಯದಲ್ಲಿ ವಿದ್ಯುತ್ ಉತ್ಪಾದಿಸಬಲ್ಲ ವಿಧಾನಗಳನ್ನು ನಮ್ಮ ವಿಜ್ಞಾನಿಗಳು ರೂಢಿಗೆ ತಂದಿದ್ದರು. ಆದ್ದರಿಂದ ಇಂಧನದ ಮರು ಸಂಸ್ಕರಣೆ ನಮ್ಮ ದೀರ್ಘಾವಧಿಯ ಇಂಧನ ಭದ್ರತೆಯ ಯೋಜನೆಯ ತಿರುಳು. ಆದರೆ 123 ಒಪ್ಪಂದದ ಪ್ರಕಾರ, ಹೊಸ ತಂತ್ರಜ್ಞಾನ ಜಾರಿಗೆ ಬರುವವರೆಗೆ ನಾವು ಆಮದಿನಿಂದಾಗಲೀ, ದೇಶೀಯವಾಗಲೀ ಬಳಸುವಂತಿಲ್ಲ. ತಾತ್ವಿಕವಾಗಿ ನಮಗೆ ಅದನ್ನು ಬಳಸುವ ಹಕ್ಕು ಇದೆ ಎಂಬ ಪೊಳ್ಳು ಮಾತು ಮಾತ್ರ ಇದೆಯೇ ವಿನಾ ಆ ಹಕ್ಕನ್ನು ಮೊಟಕು ಮಾಡಬಲ್ಲ ಅನೇಕ ಕಲಮುಗಳು 123 ಒಪ್ಪಂದದಲ್ಲಿ ಸೇರ್ಪಡೆಯಾಗಿವೆ. ಅವನ್ನೆಲ್ಲ ತೆಗೆಸದೇ ಇದ್ದರೆ ಭವಿಷ್ಯದಲ್ಲಿ ಅದೇ ಒಂದು ಭೂತವಾಗಿ ಭಾರತವನ್ನು ಕಾಡಲಿದೆ ಎಂದು ಈ ಮೂವರು ಹಿರಿಯ ವಿಜ್ಞಾನಿಗಳ ಹೇಳಿಕೆ ಎಚ್ಚರಿಸಿದೆ.

ಈ ಮೂವರು ದೇಶದ ಪರಮಾಣು ತಂತ್ರಜ್ಞಾನದ ಬೆಳವಣಿಗೆಯಲ್ಲಿ ಸ್ವತ: ಭಾಗವಹಿಸಿದವರು. ಡಾ.ಕಲಾಂ ಪರಮಾಣು ತಜ್ಞರಲ್ಲ, ಕ್ಷಿಪಣಿ ತಂತ್ರಜ್ಞರು ಎಂಬುದನ್ನು ಕೂಡಾ ಇಲ್ಲಿ ಗಮನಿಸದಿರಲು ಸಾಧ್ಯವಿಲ್ಲ. ಹೈಡ್ ಆಕ್ಟ್ ಮತ್ತು 123 ಒಪ್ಪಂದದ ಕುರಿತ ದೇಶವ್ಯಾಪಿ ಚರ್ಚೆಯಲ್ಲಿ ಎತ್ತಿರುವ ಹಲವಾರು ಪ್ರಶ್ನೆಗಳಿಗೆ ಅವರು ಕೂಡಾ ಉತ್ತರಗಳನ್ನು ಕೊಟ್ಟಿಲ್ಲ, ಬರೀ ತೀರ್ಪು ಹೇಳಿದ್ದಾರೆ ಎಂಬುದೂ ಗಮನಾರ್ಹ.



**ಸಿಪಿಐ(ಎಂ) ಕೇವಲ ಚೀನಾದ ಹಿತಾಸಕ್ತಿಗಳಿಗಾಗಿ ಈ ಒಪ್ಪಂದವನ್ನು ವಿರೋಧಿಸುತ್ತದೆ ಎಂದು ಕೆಲವರು ಟೀಕಿಸಿದರೆ, ಇನ್ನು ಕೆಲವರು ಅಮೆರಿಕ–ವಿರೋಧವು ಸಿಪಿಐ(ಎಂ)ನ ಸ್ವಭಾವಸಿದ್ದ ಅಂಶ, ಅಷ್ಟಕ್ಕೇ ಈ ವಿರೋಧ ಎನ್ನುತ್ತಾರೆ. ಇದಕ್ಕೆ ಏನನ್ನುತ್ತೀರಿ?**

ಈ ಟೀಕೆಗಳನ್ನು ಹಿಂದೆಯೂ ಹಲವು ಸಂದರ್ಭಗಳಲ್ಲಿ ಕೇಳಿದ್ದೇವೆ. ಅವಕ್ಕೆ ಉತ್ತರಗಳನ್ನೂ ನೀಡಲಾಗಿದೆ. ಈಗಿನ ಸಂದರ್ಭದಲ್ಲಿ ಅವನ್ನು ಹೀಗೆ ಪುನರುಚ್ಚರಿಸಬಹುದು:

ಸಿಪಿಐ(ಎಂ)ನ ಇತಿಹಾಸದ ಬಗ್ಗೆ ತಿಳಿದಿರುವವರಿಗೆ, ವಿಶ್ವದ ಎರಡು ಪ್ರಮುಖ ಕಮ್ಯುನಿಸ್ಟ್ ಪಕ್ಷಗಳಾದ ಸೋವಿಯೆತ್ ಒಕ್ಕೂಟ ಕಮ್ಯುನಿಸ್ಟ್ ಪಕ್ಷ ಮತ್ತು ಚೀನಾ ಕಮ್ಯುನಿಸ್ಟ್ ಪಕ್ಷ ಸುಮಾರು ಎರಡು ದಶಕಗಳ ವರೆಗೆ ಸಿಪಿಐ(ಎಂ)ನ ಧೋರಣೆಗಳನ್ನು ವಿಭಿನ್ನ ಕಣ್ಣೋಟಗಳಿಂದ ವಿರೋಧಿಸುತ್ತಲೇ ಇದ್ದವು ಎಂಬ ಸಂಗತಿ ತಿಳಿದಿರುತ್ತದೆ. ಏಕೆಂದರೆ ಭಾರತದ ಮತ್ತು ಇಲ್ಲಿಯ ಜನತೆಯ ಹಿತಾಸಕ್ತಿಯೇನು, ಸಮಾಜದ ಸ್ವರೂಪವೇನು ಎಂಬುದರ ಬಗ್ಗೆ ಸಿಪಿಐ(ಎಂ)ಗೆ ತನ್ನದೇ ಸ್ವತಂತ್ರ ಕಣ್ಣೋಟವಿದ್ದು, ಅದರ ಆಧಾರದಲ್ಲಿಯೇ ಅದು ತನ್ನ ಧೋರಣೆಗಳನ್ನು ರೂಪಿಸಿಕೊಳ್ಳುತ್ತದೆ. ಉದಾಹರಣೆಗೆ, ಭಾರತ ಸಿಟಿಬಿಟಿ(ಸಮಗ್ರ ಅಣು ಪರೀಕ್ಷಣಾ ನಿಷೇಧ ಸಂಧಿ)ಗೆ ಸಹಿ ಹಾಕಬೇಕು ಎಂಬುದು ಚೀನಾದ ಬಯಕೆ. ಆದರೆ ಇದು ತಾರತಮ್ಯದ ಸಂಧಿಯಾದ್ದರಿಂದ ಭಾರತ ಇದಕ್ಕೆ ಸಹಿ ಹಾಕಬಾರದು ಎಂದು ಸಿಪಿಐ(ಎಂ) ಹೇಳುತ್ತಲೇ ಬಂದಿದೆ.

ಆದ್ದರಿಂದ ಅಮೆರಿಕನ್ ಸಾಮ್ರಾಜ್ಯಶಾಹಿಗೆ ದೇಶದ ಸಾರ್ವಭೌಮತೆಯನ್ನು ಮಾರಲು ಸಿದ್ಧವಾಗಿರುವವರಿಂದ ಈ ಬಗ್ಗೆ ಯಾವುದೇ ಸಲಹೆಯಾಗಲೀ, ಸರ್ಟಿಫಿಕೇಟಾಗಲೀ ಸಿಪಿಐ(ಎಂ)ಗೆ ಬೇಕಿಲ್ಲ. ವಾಸ್ತವವಾಗಿ ಇಂತಹ ಟೀಕಾಕಾರರೇ ಭಾರತಕ್ಕೆ ಎದುರಾಗಿ ಚೀನಾ ಮತ್ತು ಪಾಕಿಸ್ತಾನದ ಹಿತಾಸಕ್ತಿಗಳನ್ನು ಈಡೇರಿಸಲು ಈ ಮೂಲಕ ಮುಂದಾಗಿದ್ದಾರೆ ಎಂದೇ ವಾದಿಸಬಹುದಲ್ಲ !. ಏಕೆಂದರೆ ಈ ಒಪ್ಪಂದ ಕಾರ್ಯಗತವಾದರೆ, ನಮ್ಮ ಪರಮಾಣು ಸಾಮರಿಕ ಸಾಮರ್ಥ್ಯದ ಮೇಲೆ ಬಹಳಷ್ಟು ನಿರ್ಬಂಧ ಬರುತ್ತದೆ. ಇದರಿಂದ ಚೀನಾ ಮತ್ತು ಪಾಕಿಸ್ತಾನಕ್ಕೆ ಸಾಮರಿಕ ಪ್ರಯೋಜನ ಒದಗಿಸಿದಂತಾಗುವುದಿಲ್ಲವೇ?

ಒಟ್ಟಿನಲ್ಲಿ ಭಾರತದ ಮತ್ತು ಇಲ್ಲಿಯ ಜನತೆಯ ಪರವಾಗಿದ್ದೀರೋ ಇಲ್ಲವೋ ಎಂಬುದೇ ಇಲ್ಲಿ ಮುಖ್ಯವೇ ಹೊರತು ಬೇರೆ ಯಾವುದೇ ದೇಶದ ಪರವಾಗಿದ್ದೀರೋ ಅಥವ ವಿರುದ್ಧವಾಗಿದ್ದೀರೋ ಎಂಬುದಲ್ಲ. ಅಮೆರಿಕನ್ ಆಳರಸರ ಸಾಮ್ರಾಜ್ಯಶಾಹೀ ಯಜಮಾನಿಕೆಯ ವರ್ತನೆಗಳನ್ನು ಹಲವು ಬಾರಿ ಕಂಡಿದ್ದೇವೆ. ಹೀಗಿರುವಾಗ, ನಮ್ಮ ದೇಶದ ಅಭಿವೃದ್ಧಿಗೆ ಇಂತಹ ಒಂದು ಶಕ್ತಿಯನ್ನು ಅವಲಂಬಿಸಲು ಸಾಧ್ಯವೇ? ಅದು ಭಾರತ ಅಣ್ವಸ್ತ್ರ ಹೊಂದಿರಬಾರದು ಎಂದು ಅಮೇರಿಕಾ ಯತ್ನಿಸುತ್ತಿರುವಾಗ, ಅಮೆರಿಕಾ ನಮ್ಮ ದೇಶವನ್ನು ಒಂದು ಪ್ರಬಲ ದೇಶವಾಗಿ ಮಾಡಲು ಸಹಾಯ ಮಾಡುತ್ತದೆ ಎಂಬುದು ನಮ್ಮ ಆಳರಸರ ನಿರೀಕ್ಷೆ ಒಂದು ಭ್ರಮೆ. ನಾವು ಅಭಿವೃದ್ಧಿ ಸಾಧಿಸಲು, ಒಂದು ಪ್ರಬಲ ಶಕ್ತಿಯಾಗಲು ಅಮೆರಿಕವನ್ನು ಅವಲಂಬಿಸುವ ಅಗತ್ಯವಿದೆಯೇ ಎಂಬುದು ನಮ್ಮ ಮುಂದಿರುವ ಪ್ರಶ್ನೆ. ನಾವು ನಮ್ಮ ಕಾಲ ಮೇಲೆಯೇ ನಿಲ್ಲಬೇಕು ಹಾಗು ಬೇರೆ ಯಾವುದೇ ದೇಶದೊಂದಿಗೆ ಸಮಾನ ಸಂಬಂಧಗಳನ್ನು ಹೊಂದಿರಬೇಕು, ಕಿರಿಯ ಪಾಲುದಾರನೆಂಬ ಅಸಮ ಸಂಬಂಧವನ್ನಲ್ಲ ಎಂಬುದು ಸಿಪಿಐ(ಎಂ) ಕಣ್ಣೋಟ.

ಚೀನಾ ಕೂಡಾ 123 ಒಪ್ಪಂದ ಮಾಡಿಕೊಂಡಿರುವಾಗ ಭಾರತವೂ ಏಕೆ ಮಾಡಿಕೊಳ್ಳಬಾರದು ಎಂದೂ ಕೆಲವರು ಪ್ರಶ್ನಿಸುತ್ತಾರೆ. ಅಣು ಪ್ರಸರಣ ನಿಷೇಧ ಸಂಧಿ(ಎನ್‌ಪಿಟಿ) ಜಗತ್ತಿನ ದೇಶಗಳನ್ನು ಅಣ್ವಸ್ತ್ರ ಹೊಂದಿರುವ ದೇಶಗಳು ಮತ್ತು ಅಣ್ವಸ್ತ್ರ ಹೊಂದಿರದ ದೇಶಗಳು ಎಂದು ವಿಭಜಿಸುತ್ತದೆ. ಅಣ್ವಸ್ತ್ರ ಹೊಂದಿರುವ ದೇಶಗಳಿಗೆ ಹಕ್ಕುಗಳಿವೆ, ಬಾಧ್ಯತೆಗಳಿಲ್ಲ, ಆದರೆ ಅಣ್ವಸ್ತ್ರವಿಲ್ಲದ ದೇಶಗಳಿಗೆ ಹಕ್ಕುಗಳಿಲ್ಲ , ಬಾಧ್ಯತೆಗಳಿವೆ ಎಂದು ಹೇಳಲಾಗುತ್ತದೆ. ಚೀನಾ ಒಂದು ಅಣ್ವಸ್ತ್ರ ಹೊಂದಿರುವ ದೇಶ, ಭಾರತ ಅಣ್ವಸ್ತ್ರ

ಹೊಂದಿರದ ದೇಶ ಎಂದು ಪರಿಗಣಿಸಲಾಗಿದೆ. ಇದು ಒಂದು ನಿರ್ಣಾಯಕ ವ್ಯತ್ಯಾಸ. ಚೀನಾದ ಒಪ್ಪಂದ ಭಾರತದ ಒಪ್ಪಂದದಂತೆ ಹೈಡ್ ಆಕ್ಟ್‌ಗೆ ಒಳಪಟ್ಟಿಲ್ಲ.

ಎಡಪಕ್ಷಗಳು ಎತ್ತಿದ ಗಂಭೀರ ಪ್ರಶ್ನೆಗಳಿಗೆ ಉತ್ತರ ಕೊಡಲಾಗದವರು, ಆದರೆ ಅಮೆರಿಕಾದ ಮತ್ತು ನಮ್ಮ ದೇಶದ ಆಳರಸರ ಕೃಪಾಕಟಾಕ್ಷಕ್ಕೆ ಹಾತೊರೆಯುವವರು ಮಾತ್ರವೇ ಇಂತಹ ಕ್ಷುಲ್ಲಕ ಟೀಕೆಗಳನ್ನು ಮಾಡಲು ಸಾಧ್ಯ. ಅವರು ಇದನ್ನು ಬಿಟ್ಟು ಸಾಧ್ಯವಾದರೆ ಎಡಪಕ್ಷಗಳು ಎತ್ತಿರುವ ಗಂಭೀರ ಆಕ್ಷೇಪಗಳಿಗೆ ಉತ್ತರ ಕೊಡುವ ಜಾಣ್ಮೆಯನ್ನು ಪ್ರದರ್ಶಿಸಲಿ.



**ಈ ಒಪ್ಪಂದವನ್ನು ಸಿಪಿಐ(ಎಂ) ಮತ್ತು ಎಡಪಕ್ಷಗಳು ಏಕೆ ವಿರೋಧಿಸುತ್ತವೆ? ಇದರಲ್ಲಿ ಅಂತಹ ಆಕ್ಷೇಪಾರ್ಹ ಸಂಗತಿಗಳು ಏನಿವೆ?**

ಇದು ಕೇವಲ ಒಂದು ಪರಮಾಣು ಸಹಕಾರ ಒಪ್ಪಂದವಷ್ಟೇ ಅಲ್ಲ, ಇದಕ್ಕೆ ಹಲವು ಆಯಾಮಗಳಿವೆ, ಅವುಗಳಲ್ಲಿ ಹಲವು ಆತಂಕಕಾರಿಯಾದ ಸಂಗತಿಗಳಿವೆ ಎಂಬುದು ಇದನ್ನು ವಿರೋಧಿಸುವವರ ಮುಖ್ಯ ವಾದ. ಇದರಲ್ಲಿ ಅಮೆರಿಕಾದ ಸಾಮರಿಕ(Strategic) ಅಂದರೆ ಯುದ್ಧನೀತಿಯ ಹಿತಾಸಕ್ತಿಗಳು, ಭಾರತದ ಸ್ವತಂತ್ರ ವಿದೇಶಾಂಗ ನೀತಿಯನ್ನು ಮೊಟಕುಗೊಳಿಸುವ ಅಂಶಗಳು, ನಮ್ಮ ದೇಶದ ರಕ್ಷಣೆ, ಉದ್ದಿಮೆ, ಕೃಷಿ ಮತ್ತು ಶಿಕ್ಷಣದ ಮೇಲೂ ನಕಾರಾತ್ಮಕ ಪ್ರಭಾವ ಬೀರುವ ಅಂಶಗಳು ಇವೆ. ಆದ್ದರಿಂದ ಇವೆಲ್ಲದರ ಬಗ್ಗೆ ಚರ್ಚೆಯಾಗಬೇಕು ಎಂಬ ಆಗ್ರಹ ಬಂದಿದೆ. ಇದು ಕೇವಲ ಒಂದು ಪರಮಾಣು ಒಪ್ಪಂದ ಅಲ್ಲ ಎಂಬುದು ಅಮೆರಿಕಾದ ಸರಕಾರದ ವಕ್ತಾರರ ಹೇಳಿಕೆಗಳಿಂದಲೂ ಸ್ಪಷ್ಟವಾಗುತ್ತದೆ. ಜುಲೈ 27, 2007 ರಂದು ಈ ಒಪ್ಪಂದವನ್ನು ಅಂತಿಮಗೊಳಿಸಿದ ಕೂಡಲೆ ಅಮೆರಿಕಾದ ವಿದೇಶಾಂಗ ರಾಜಕೀಯ ವ್ಯವಹಾರಗಳ ಅಪರ ಕಾರ್ಯದರ್ಶಿ (ಅಂಡರ್ ಸೆಕ್ರೆಟರಿ) ನಿಕೋಲಾಸ್ ಬರ್ನ್ಸ್ ಅಧಿಕೃತ ಹೇಳಿಕೆಯಲ್ಲಿ ಇದರಿಂದಾಗಿ ಅಮೆರಿಕಾ ಸಂಯುಕ್ತ ಸಂಸ್ಥಾನಗಳಿಗೆ ಆಗುವ ಪ್ರಯೋಜನಗಳ ಪಟ್ಟಿ ಮಾಡಿದ್ದರು. ನಂತರ 'ಫಾರಿನ್ ಅಫೇರ್ಸ್' (ವಿದೇಶಾಂಗ ವ್ಯವಹಾರಗಳು) ಪತ್ರಿಕೆಯ ನವೆಂಬರ್- ಡಿಸೆಂಬರ್ ಸಂಚಿಕೆಯಲ್ಲಿ ಅವರ ಲೇಖನದ ಶಿರೋನಾಮೆಯೇ "ಭಾರತದೊಂದಿಗೆ ಅಮೆರಿಕಾದ ಸಾಮರಿಕ ಅವಕಾಶ: ಹೊಸ ಅಮೆರಿಕಾ–ಭಾರತ ಪಾಲುದಾರಿಕೆ". ಅದರಲ್ಲಿ ಅವರು ಈ 'ಪ್ರಯೋಜನ'ಗಳನ್ನು ವಿಶದಪಡಿಸಿದ್ದಾರೆ– "ಈ ಒಪ್ಪಂದ ಸಾಮರಿಕ ಪಾಲುದಾರಿಕೆಯನ್ನು ಆಳಗೊಳಿಸುತ್ತದೆ, ಭಾರತದಲ್ಲಿ ಅಮೆರಿಕಾದ ವ್ಯಾಪಾರಸ್ಥರಿಗೆ ಹೊಸ ಅವಕಾಶಗಳನ್ನು ಸೃಷ್ಟಿಸುತ್ತದೆ, ಇರಾನ್‌ನಂತಹ ಪರಮಾಣು ಬಹಿಷ್ಕೃತರಿಗೆ ಶಕ್ತಿಶಾಲಿ ಸಂದೇಶ ನೀಡುತ್ತದೆ........ ಮಿಲಿಟರಿ ತರಬೇತಿ, ಸಮರಾಭ್ಯಾಸಗಳು, ಭಾರತೀಯ ಸಶಸ್ತ್ರ ಪಡೆಗಳಿಗೆ ಅಮೆರಿಕನ್ ಮಿಲಿಟರಿ ಮಾರಾಟಗಳು.....". ಅಮೆರಿಕಾದ ಅಧ್ಯಕ್ಷ ಬುಶ್‌ರಿಂದ ಹಿಡಿದು ಬರ್ನ್ಸ್, ಭಾರತದಲ್ಲಿ ಅಮೆರಿಕನ್ ರಾಯಭಾರಿ ಮಲ್‌ಫೋರ್ಡ್ ಮುಂತಾದವರ ವರ್ತನೆಯೇ, ಈ ಒಪ್ಪಂದ ಬೇಗನೇ ಕಾರ್ಯಗತವಾಗಬೇಕು ಎಂಬ ತರಾತುರಿಯೇ ಸಂದೇಹಕ್ಕೆ ಎಡೆಮಾಡಿಕೊಡುತ್ತದೆ.

ಇತ್ತೀಚೆಗೆ ಅಮೆರಿಕಾದ ವಿದೇಶಾಂಗ ವ್ಯವಹಾರಗಳ ಸದನ ಸಮಿತಿ ಈ ಒಪ್ಪಂದ ಕುರಿತಂತೆ ಎತ್ತಿದ ಪ್ರಶ್ನೆಗಳಿಗೆ ಅಮೆರಿಕನ್ ಆಡಳಿತ ನೀಡಿದ ಉತ್ತರಗಳನ್ನು

ಬಹಿರಂಗಗೊಳಿಸಬಾರದು ಎಂದು ವಿಧಿಸಿರುವುದು ಕೂಡಾ ಈ ಸಂದೇಹವನ್ನು ಇನ್ನಷ್ಟು ಬಲಪಡಿಸುತ್ತದೆ. 123 ಒಪ್ಪಂದ ಹೈಡ್ ಕಾನೂನಿಗೆ ಅನುಗುಣವಾಗಿದೆ ಎಂದು ಅಮೆರಿಕನ್ ಆಡಳಿತಗಾರರು ಹೇಳುತ್ತಿದ್ದರೆ, ಭಾರತದ ಆಡಳಿತಗಾರರು ಹೈಡ್ ಕಾನೂನಿಗೂ ನಮಗೂ ಸಂಬಂಧವಿಲ್ಲ ಎಂದು ಹೇಳುತ್ತಿದ್ದುದರ ಹಿನ್ನೆಲೆಯಲ್ಲಿ ಅಮೆರಿಕಾದ ವಿದೇಶಾಂಗ ವ್ಯವಹಾರಗಳ ಸದನ ಸಮಿತಿ ಅಮೆರಿಕನ್ ಆಡಳಿತಕ್ಕೆ ಈ ವ್ಯವಹಾರಕ್ಕೆ ಸಂಬಂಧಪಟ್ಟಂತೆ 40 ಪ್ರಶ್ನೆಗಳನ್ನು ಸ್ಪಷ್ಟೀಕರಣಕ್ಕಾಗಿ ಕಳಿಸಿತ್ತು. ಮಾರ್ಚ್ 2008ರಲ್ಲಿ ಅಮೆರಿಕನ್ ಆಡಳಿತ ಸ್ಪಷ್ಟೀಕರಣಗಳನ್ನು ಸಲ್ಲಿಸಿತು. ಆದರೆ, ಇದನ್ನು ಅಧಿಕೃತವಾಗಿ 'ಗುಪ್ತ ಮಾಹಿತಿ' ಎಂದು ವರ್ಗೀಕರಿಸದಿದ್ದರೂ ಬಹಿರಂಗಪಡಿಸದಂತೆ ಅಮೆರಿಕನ್ ಆಡಳಿತ ಸದನ ಸಮಿತಿಯನ್ನು ಕೇಳಿಕೊಂಡಿದ್ದು ಸದನ ಸಮಿತಿ ಅದಕ್ಕೆ ಒಪ್ಪಿಕೊಂಡಿದೆ. ಅವನ್ನು ಬಹಿರಂಗಪಡಿಸಿದರೆ ಈ ಒಪ್ಪಂದ ಮುಳುಗಿ ಹೋಗಬಹುದು ಎಂಬ ಕಾರಣಕ್ಕೆ ಹೀಗೆ ಮಾಡಲಾಗಿದೆ ಎಂದು ಸಮಿತಿಯ ಒಬ್ಬ ವಕ್ತಾರರು ಹೇಳಿರುವುದಾಗಿ ಮೇ 9.2008ರ 'ವಾಶಿಂಗ್ಟನ್ ಪೋಸ್ಟ್' ವರದಿ ಮಾಡಿದೆ. ಅಮೆರಿಕನ್ ಆಡಳಿತ ಹೈಡ್ ಕಾನೂನನ್ನು ಬದಿಗೊತ್ತಿ ಈ 123 ಒಪ್ಪಂದ ಮಾಡಿಕೊಂಡಿದೆ ಎಂದು ಸದನ ಸಮಿತಿಗೆ ಅನಿಸಿದ್ದರೆ ಅದನ್ನು ಬಹಿರಂಗ ಪಡಿಸದಿರಲು ಅದು ಒಪ್ಪುತ್ತಿರಲಿಲ್ಲ. ಆದ್ದರಿಂದ ಅವನ್ನು ಬಹಿರಂಗ ಪಡಿಸಿದರೆ ಭಾರತ ಸರಕಾರದ ವಕ್ತಾರರ ಹೇಳಿಕೆಗಳು ಸರಿಯಲ್ಲ, ಎಡಪಕ್ಷಗಳ ಆಕ್ಷೇಪಗಳು ಸರಿ ಎಂದು ಸಾಬೀತಾಗುತ್ತಿತ್ತು, ಆದ್ದರಿಂದಲೇ ಅವನ್ನು ಬಹಿರಂಗಪಡಿಸದಿರಲು ಒಪ್ಪಿರಬೇಕು ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ಈ ಬಗ್ಗೆ ನಮ್ಮ ದೇಶದ ಮಾಧ್ಯಮಗಳು ಯಾವವೂ ತುಟಿ ಪಿಟಕ್ಕೆಂದಿಲ್ಲ ಎಂಬುದನ್ನು ಗಮನಿಸಬೇಕು.

ಜಾರ್ಜ್ ಬುಶ್ ಭಾರತದ ಮಹಾನ್ ಗೆಳೆಯ, ಅವರು ಈ ಒಪ್ಪಂದ ಏರ್ಪಡುವಲ್ಲಿ ನೆರವಾಗಿದ್ದಾರೆ ಎನ್ನುತ್ತಾರೆ ನಮ್ಮ ಪ್ರಧಾನ ಮಂತ್ರಿಗಳು. ಮಾಧ್ಯಮಗಳಲ್ಲಿ ಬರುವ ವರದಿಗಳ ಪ್ರಕಾರ ಜಾರ್ಜ್ ಬುಶ್‌ರವರ ಬಗ್ಗೆ ಅವರ ದೇಶದಲ್ಲಿಯೇ ಹಿಂದೆ ಯಾವ ಅಧ್ಯಕ್ಷರ ಬಗ್ಗೆಯೂ ಇಲ್ಲದ್ದಷ್ಟು ಕೆಟ್ಟ ಸಾರ್ವಜನಿಕಾಭಿಪ್ರಾಯ ಇದೆ. ತನ್ನ ದೇಶದಲ್ಲಿಯೇ ಅಪ್ರಿಯನಾಗಿರುವಾತ ನಮ್ಮ ದೇಶದ ಅತ್ಯುತ್ತಮ ಗೆಳೆಯ ಹೇಗಾಗಲು ಸಾಧ್ಯ.? ವಾಸ್ತವವಾಗಿ ಮುಂದಿನ ಅಧ್ಯಕ್ಷೀಯ ಚುನಾವಣೆಯ ಮೊದಲು ಒಂದಾದರೂ ಸಕಾರಾತ್ಮಕ ಸಾಧನೆಯನ್ನು ತೋರಿಸಲಿಕ್ಕಾಗಿ ಈ ತರಾತುರಿ ಎಂದೂ ಹೇಳಲಾಗುತ್ತಿದೆ. ಅಮೆರಿಕಾದ, ಅದಕ್ಕಿಂತ ಹೆಚ್ಚಾಗಿ ಅದರ ಈಗಿನ ಆಡಳಿತಕಾರರ ಹಿತಾಸಕ್ತಿ ಈಡೇರಿಸಲು ಭಾರತ ತನ್ನ ಸ್ವತಂತ್ರ ವಿದೇಶಾಂಗ ನೀತಿ, ದೇಶೀ ಪರಮಾಣು ಕಾರ್ಯಕ್ರಮ ಮತ್ತು ಭದ್ರತಾ ಕಾಳಜಿಗಳ ಮೇಲೆ ಮಾತ್ರವಲ್ಲ, ನಮ್ಮ ಉದ್ದಿಮೆಗಳು, ಕೃಷಿ ಮತ್ತು ಶಿಕ್ಷಣ ರಂಗದ ಮೇಲೂ ಇದು ಬೀರಬಹುದಾದ ಗಂಭೀರ ಪರಿಣಾಮಗಳನ್ನು ಪರಿಶೀಲಿಸದೆ ಮುಂದುವರೆಯಬೇಕೆ ಎಂಬುದೇ ನಮ್ಮ ಮುಂದಿರುವ ಪ್ರಶ್ನೆ.

❖ **ಈ ಒಪ್ಪಂದದ ಜೊತೆಗಿರುವ ಯಾವ ಕ್ರಮಗಳು ನಮ್ಮ ಸ್ವತಂತ್ರ ವಿದೇಶಾಂಗ ನೀತಿಗೆ ಧಕ್ಕೆ ತರುತ್ತವೆ? ಭಾರತವನ್ನು ಅಮೆರಿಕಾದ ಸಾಮರಿಕ ಹುನ್ನಾರಗಳಲ್ಲಿ ಸೆಳೆಯಲಾಗುತ್ತಿದೆ ಎಂದು ಹೇಗೆ ಹೇಳುತ್ತೀರಿ?**

ಈ ಒಪ್ಪಂದ ಅಮೆರಿಕಾವು ಭಾರತದೊಂದಿಗೆ ಬಯಸುವ ಸಾಮರಿಕ ಸಂಬಂಧದ

ಒಂದು ಭಾಗ ಎಂಬುದು ಸ್ಪಷ್ಟ. ಇದು "ವಿಶ್ವದಲ್ಲೆಡೆ ಸ್ಥಿರ, ಉತ್ತಮ ಆಡಳಿತದ ಪ್ರಜಾಪ್ರಭುತ್ವಗಳನ್ನು ಪ್ರೋತ್ಸಾಹಿಸುವ ಅಮೆರಿಕಾ-ಭಾರತ ಪ್ರಜಾರಾಂದೋಲನ"ದ ಭಾಗ ಎಂದೂ ಅಮೆರಿಕಾ ಕಾಣುವುದಾಗಿ ಅವರು ಹೇಳುತ್ತಾರೆ. ಇದು ನಿಜವಾಗಿಯೂ ಒಂದು ದೊಡ್ಡ ವಿಡಂಬನೆ. ಏಕೆಂದರೆ ಇದೇ ಅಮೆರಿಕಾ ಚಿಲಿಯಲ್ಲಿ, ಶಹಾನ ಆಳ್ವಿಕೆಯಲ್ಲಿದ್ದ ಇರಾನಿನಲ್ಲಿ, ದಕ್ಷಿಣ ಪೂರ್ವ ಏಶ್ಯಾದ ಫಿಲಿಪ್ಪೈನ್ಸ್‌ನಲ್ಲಿ ಮಿಲಿಟರಿ ಸರ್ವಾಧಿಕಾರಗಳನ್ನು ಬೆಂಬಲಿಸಿದ, ಪೋಷಿಸಿದ ಸಂಗತಿಯನ್ನು ಪ್ರಜಾಪ್ರಭುತ್ವವಾದಿಗಳು ಮರೆಯಲು ಸಾಧ್ಯವೇ? ಈಗಲೂ "ಸ್ಥಿರ, ಉತ್ತಮ ಆಡಳಿತದ ಪ್ರಜಾಪ್ರಭುತ್ವಕ್ಕೆ ಪ್ರೋತ್ಸಾಹದ" ನಿಜವಾದ ಅರ್ಥ ಇರಾಕಿನಲ್ಲಿ ಎದ್ದು ಕಾಣುತ್ತಿದೆ. ಅಮೆರಿಕಾದಲ್ಲಿಯೇ ಇದಕ್ಕೆ ಭಾರೀ ವಿರೋಧ ವ್ಯಕ್ತವಾಗುತ್ತಿದೆ. ಆದ್ದರಿಂದ ವಾಸ್ತವವಾಗಿ, ಈ ಮೂಲಕ ತನ್ನ ವಿಶ್ವ ಯಜಮಾನಿಕೆಯ ಹುನ್ನಾರಗಳಲ್ಲಿ ಭಾರತವನ್ನು ತನ್ನ ಅಡಿಯಾಳು ಮಿತ್ರನಾಗಿ ಸೆಳೆದುಕೊಳ್ಳಲು ಪ್ರಯತ್ನಿಸುತ್ತಿದೆ ಎಂಬ ಟೀಕೆ ಸಕಾರಣವೆನಿಸುತ್ತದೆ.

ವಿದೇಶಾಂಗ ನೀತಿಯಲ್ಲಿ, ಒಂದು ಪ್ರಮುಖ ಹೆಜ್ಜೆಯೆಂದರೆ ಜೂನ್ 28, 2005 ರಂದು "ಭಾರತ – ಅಮೆರಿಕಾ ರಕ್ಷಣಾ ಸಂಬಂಧಗಳಿಗೆ ಹೊಸ ಚೌಕಟ್ಟು" ಎಂಬ ಒಪ್ಪಂದಕ್ಕೆ ವಾಶಿಂಗ್‌ಟನ್‌ನಲ್ಲಿ ಸಹಿ. ಅಂದರೆ ಜುಲೈ 18, 2005 ರಂದು ಮನಮೋಹನ್ ಸಿಂಗ್-ಬುಶ್ ಜಂಟಿ ಹೇಳಿಕೆಯ ಸ್ವಲ್ಪವೇ ಮೊದಲು. "ಅಮೆರಿಕಾ – ಭಾರತ ರಕ್ಷಣಾ ಸಂಬಂಧಗಳು ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮತ್ತು ಕಾನೂನಿನ ಆಳ್ವಿಕೆಯಲ್ಲಿ ಒಂದು ಸಮಾನ ನಂಬಿಕೆಯಿಂದ ಹೊಮ್ಮಿದೆ ಹಾಗೂ ಸಮನಾದ ಭದ್ರತಾ ಹಿತಾಸಕ್ತಿಗಳನ್ನು ಈಡೇರಿಸಲು ಪ್ರಯತ್ನಿಸುತ್ತದೆ" ಎನ್ನುತ್ತದೆ ಈ ಹೊಸ ಚೌಕಟ್ಟು. ಆದರೆ ಪಶ್ಚಿಮ ಏಶ್ಯಾದಲ್ಲಿ ಪ್ರಜಾಪ್ರಭುತ್ವವನ್ನು ತರುತ್ತೇನೆಂದು ಅಮೆರಿಕಾ ನಡೆಸಿದ ಇರಾಕ್ ಅತಿಕ್ರಮಣ ಅಂತರ್ರಾಷ್ಟ್ರೀಯ ಕಾನೂನಿನ ನಗ್ನ ಉಲ್ಲಂಘನೆಯಾಗಿತ್ತು ಎಂಬುದನ್ನು ಉಪೇಕ್ಷಿಸಲು ಸಾಧ್ಯವೇ? ಭಾರತದ ವಿದೇಶಾಂಗ ನೀತಿ ಈ 'ಹೊಸ ಚೌಕಟ್ಟಿ'ನ ಮೂಲಕ ಎತ್ತ ಸಾಗಿದೆಯೆಂಬುದರ ಸಂಕೇತ ಇದರಿಂದ ದೊರೆಯಿತು. ಈ ಚೌಕಟ್ಟಿನ ಹರಹು ತುಂಬಾ ವ್ಯಾಪಕವಾಗಿದೆ. ಇದು ಭಾರತವನ್ನು ಜಂಟಿ ಸಮರಾಭ್ಯಾಸಗಳು, ಜಂಟಿ ಯೋಜನೆಗಳು, ಬೇರೆ ದೇಶಗಳಲ್ಲಿ ಜಂಟಿ ಕಾರ್ಯಾಚರಣೆಗಳು ಮತ್ತು ರಕ್ಷಣಾ ಖರೀದಿಗಳು ಮುತಾದವುಗಳ ಮೂಲಕ ಸಾಮರಿಕ ಮತ್ತು ಮಿಲಿಟರಿ ಸಂಬಂಧಗಳ ಜಾಲದೊಳಗೆ ಸೆಳೆಯುವುದಕ್ಕೆ ಅಡಿಗಲ್ಲು ಹಾಕಿದೆ.

ಈ ಒಪ್ಪಂದವಾದ ಬೆನ್ನ ಹಿಂದೆಯೇ ಅಂತರ್ರಾಷ್ಟ್ರೀಯ ಅಣು ಶಕ್ತಿ ಏಜೆಂಸಿ (ಐಎಇಎ) ಯಲ್ಲಿ ಎರಡು ಸಂದರ್ಭಗಳಲ್ಲಿ ಭಾರತ ತನ್ನ ಎಂದಿನ ನಿಲುವು ಬದಲಿಸಿ ಇರಾನ್‌ವ ವಿರುದ್ಧ ನಡೆದ ಪ್ರಯತ್ನಗಳಲ್ಲಿ ಭಾಗಿಯಾಯಿತು. ಇರಾನನ್ನು ಶಿಕ್ಷಿಸುವ ಕ್ರಮಗಳು, ನಿರ್ಬಂಧಗಳಿಗೆ ಇದು ನಾಂದಿ ಹಾಕಿತು. ಭಾರತ ಐಎಇಎನಲ್ಲಿ ಅಮೆರಿಕಾದ ಒತ್ತಡಗಳಿಗೆ ಮಣಿಯಿತು ಎಂಬುದನ್ನು ಈಗ ಬುಶ್ ಆಡಳಿತದ ಅಧಿಕಾರಿಗಳು ಬಹಿರಂಗ ಪಡಿಸಿದ್ದಾರೆ. "ಭಾರತದೊಂದಿಗೆ ಉತ್ತಮಗೊಳ್ಳುತ್ತಿರುವ ನಮ್ಮ ಸಂಬಂಧಗಳ ಸಾಮರಿಕ ಪ್ರಯೋಜನಗಳನ್ನು ಈಗಾಗಲೇ ನೋಡಿದ್ದೇವೆ. ಐಎಇಎಯಲ್ಲಿ ಇರಾನ್ ಪ್ರಶ್ನೆಯ ಮೇಲೆ ಕಳೆದ ಸೆಪ್ಟೆಂಬರ್ ಮತ್ತು ಈ ಫೆಬ್ರವರಿಯಲ್ಲಿ ಭಾರತದ ಮತ ನವದೆಹಲಿ ತನ್ನ ಪಾರಂಪರಿಕ ವಿದೇಶಾಂಗ ನೀತಿಗಳಲ್ಲಿ ಹೊಂದಾಣಿಕೆ ಮಾಡಿಕೊಳ್ಳಬಲ್ಲುದು, ಅದಕ್ಕೆ ಅದು ಸಿದ್ದವಿದೆ ಎಂಬುದನ್ನು ಪ್ರದರ್ಶಿಸಿದೆ" ಎಂದು ಅಮೆರಿಕಾದ ಸೆನೆಟರ್ ರಿಚರ್ಡ್ ಜಿ. ಲುಗರ್

ಸೆನೆಟ್ ವಿದೇಶಾಂಗ ಸಂಬಂಧಗಳ ಸಮಿತಿಯ ಮುಂದೆ ಸಂತೋಷದಿಂದ ಟಿಪ್ಪಣಿ ಮಾಡಿದರು. 123 ಒಪ್ಪಂದವನ್ನು ಪ್ರಕಟಿಸಿದ ನಂತರ ಹಿಂದೆ ಹೇಳಿದ ನಿಕೊಲಸ್ ಬರ್ನ್ಸ್ ಲೇಖನದಲ್ಲೂ "ನಿಯಮಗಳ ಪ್ರಕಾರ ಆಡಿದರೆ ಭಾರತದಂತೆ ನಿಮಗೆ ಇನಾಮು ದೊರೆಯುತ್ತದೆ, ಇಲ್ಲವಾದರೆ ಇರಾನಿನಂತೆ ನಿರ್ಬಂಧಗಳನ್ನು ಮತ್ತು ಒಂಟಿತನವನ್ನು ಎದುರಿಸಬೇಕಾಗುತ್ತದೆ ಎಂಬ ಬಲವಾದ ಸಂದೇಶವನ್ನು ನೀಡಿದೆ" ಎನ್ನುತ್ತಾರೆ. ಇದು ಭಾರತದ ಸ್ವತಂತ್ರ ವಿದೇಶಾಂಗ ನೀತಿಯ ದಿಕ್ಕನ್ನು ಬದಲಿಸಬೇಕೆಂಬ ಬೆದರಿಕೆಯಲ್ಲದೆ ಮತ್ತೇನು? ಈ ಒಪ್ಪಂದದಿಂದ ಭಾರತದ ವಿದೇಶಾಂಗ ನೀತಿ ಬದಲಾಗದು ಎಂದು ಪ್ರಧಾನಮಂತ್ರಿಗಳು ಆಗಾಗ ಹೇಳುತ್ತಿರುತ್ತಾರೆ. ಆದರೆ ಮೇಲಿನ ಸಂಗತಿ ಅದನ್ನು ಸಮರ್ಥಿಸುವುದಿಲ್ಲ.

ಮುಂದಿನ ಹೆಜ್ಜೆ ಇನ್ನೂ ಗಂಭೀರವಾದದ್ದು. ಮನಮೋಹನ್‌ಸಿಂಗ್ ಸರಕಾರ ಈಗ ಅಮೆರಿಕಾದೊಂದಿಗೆ ಒಂದು ಸೈನಿಕ ಜಮಾವಣೆ ಮತ್ತು ಸೇವಾ ಒಪ್ಪಂದದ ಬಗ್ಗೆ ಮಾತುಕತೆ ನಡೆಸುತ್ತಿದೆ. ಇದನ್ನು 'ಅರ್ಜನೆ ಮತ್ತು ಸೇವಾಂತರ ಒಪ್ಪಂದ' (Acquisition and Cross Servicing Agreement-ACSA) ಎನ್ನಲಾಗುತ್ತಿದೆ. ಈಗಾಗಲೇ ಅಮೆರಿಕಾ ನಾಟೋ ದೇಶಗಳೊಂದಿಗೆ ಇಂತಹ ಒಪ್ಪಂದಗಳನ್ನು ಹೊಂದಿದೆ. ಅಂದರೆ ಅದು ಭಾರತವನ್ನು ಏಶ್ಯಾದಲ್ಲಿ ನಾಟೋ ಮಿಲಿಟರಿ ಕೂಟದ ಕಾವಲು ಠಾಣೆಯಾಗಿ ಮಾಡುವ ಯತ್ನದಲ್ಲಿದೆ ಎಂದೇ ಅರ್ಥವಲ್ಲವೇ? ಇದು ಅಮೆರಿಕಾದ ಎಲ್ಲಾ ಹಡಗುಗಳು ಹಾಗೂ ವಿಮಾನಗಳಿಗೆ ಇಂಧನ ತುಂಬುವ ಮತ್ತು ತಂಗುವ ಎಲ್ಲಾ ಸೌಲಭ್ಯಗಳನ್ನು ಒದಗಿಸಲು ಅವಕಾಶ ನೀಡುವ ಒಪ್ಪಂದ. ಸರಳವಾಗಿ ಹೇಳುವುದಾದರೆ ಅಮೆರಿಕಾದ ನೌಕಾಪಡೆ ಇರಾಕ್ ಮತ್ತು ಇರಾನ್ ಮೇಲೆ ಬಾಂಬ್ ಹಾಕಿ ಭಾರತದ ಬಂದರುಗಳಿಗೆ ಬಂದು ಅಲ್ಲಿ ವಿಶ್ರಾಂತಿಗೆ ತಂಗಬಹುದು. ಮನರಂಜನೆ ಪಡೆದು ಮತ್ತೆ ಇಂಧನ ತುಂಬಿಸಿಕೊಂಡು ಇನ್ನೊಂದು ಸುತ್ತಿನ ಧಾಳಿಗೆ ಹೊರಡಬಹುದು. ಅಂದರೆ ಇರಾನಿನ ವಿರುದ್ಧ ಮತ ನೀಡಿದ ನಂತರ, ಮುಂದಿನ ಹೆಜ್ಜೆಯಾಗಿ ನಾವು ಪಶ್ಚಿಮ ಏಶ್ಯಾದಲ್ಲಿ ಮತ್ತಿತರ ಕಡೆಗಳಲ್ಲಿ ಅಮೆರಿಕಾದ ಮಿಲಿಟರಿ ದುಸ್ಸಾಹಸಗಳಿಗೆ ಆತಿಥ್ಯ ನೀಡುವವರಾಗುತ್ತೇವೆ.

ಇದೂ ಸಾಲದೆಂಬಂತೆ ಭಾರತವನ್ನು ಏಶ್ಯಾದಲ್ಲಿ, ಅದರಲ್ಲೂ ಪಶ್ಚಿಮ ಏಶ್ಯಾದಲ್ಲಿ ಅಮೆರಿಕಾದ ಯುದ್ಧನೀತಿಯಲ್ಲಿ ಸ್ವ-ಇಚ್ಛೆಯಿಂದಲೇ ಪಾಲುದಾರನಾಗುವಂತಾಗುತ್ತಿದೆ. ಇಲ್ಲವಾದರೆ ಅಮೆರಿಕಾ, ಜಪಾನ್ ಮತ್ತು ಆಸ್ಟ್ರೇಲಿಯಾದೊಂದಿಗೆ ಸಮರಾಭ್ಯಾಸದಲ್ಲಿ ಬಂಗಾಳಕೊಲ್ಲಿಯಲ್ಲಿ ಭಾರತದ ನೌಕಾಪಡೆಯೂ ಏಕೆ ಸೇರಿಕೊಳ್ಳಬೇಕು? ವಿಶ್ವದ ಎಲ್ಲಾ ಯುದ್ಧರಂಗಗಳಲ್ಲಿ ಪೂರ್ಣ ಪ್ರಮಾಣದ ಪ್ರಾಬಲ್ಯ ಗಳಿಸುವುದು ಅಮೆರಿಕನ್ ಸಾಮರಿಕ ಯೋಜನೆಯ ಪ್ರಮುಖ ಅಂಶ. ಈ ವಿಷಯದಲ್ಲಿ ಏಶ್ಯಾದಲ್ಲಿ ಅದಕ್ಕೆ ಕೊರತೆಯಿತ್ತು. ಸಮಸ್ತ ಪೂರ್ವ, ದಕ್ಷಿಣ ಪೂರ್ವ ಮತ್ತು ದಕ್ಷಿಣ ಏಶ್ಯಾ ಪ್ರದೇಶದಲ್ಲಿ ಅದಕ್ಕಿರುವುದು ಒಂದೇ ದೊಡ್ಡ ಮಿಲಿಟರಿ ನೆಲೆ. ಅದೆಂದರೆ ಜಪಾನಿನ ಒಕಿನಾವಾ. ಹಿಂದೂ ಮಹಾಸಾಗರದಲ್ಲಿ ಇರುವ ಇನ್ನೊಂದೇ ನೆಲೆಯೆಂದರೆ ಡಿಗೋಗಾರ್ಶಿಯಾ. ಆದ್ದರಿಂದ ಭಾರತವನ್ನು ತನ್ನ ಜಾಲದೊಳಗೆ ಸೆಳೆದುಕೊಂಡು ಏಶ್ಯಾದಲ್ಲಿ ತನ್ನ ಸಾಮರಿಕ ಪರಿಧಿಯನ್ನು ವಿಸ್ತರಿಸಿಕೊಳ್ಳುವಲ್ಲಿ ಅದು ಯಶಸ್ವಿಯಾದಂತಾಗಿದೆ. ಆದರೆ ನಮ್ಮ ಮುಂದಿನ ಪ್ರಶ್ನೆ ಅಮೆರಿಕಾದ ಸಾಮರಿಕ ಕಣ್ಣೋಟದ, ಯುದ್ಧನೀತಿಯ ಭಾಗವಾಗಿ ಭಾರತಕ್ಕೆ ದಕ್ಕುವ ಪ್ರಯೋಜನವಾದರೂ ಏನು? ಇದು ಭಾರತದ ಸ್ವತಂತ್ರ ವಿದೇಶಾಂಗ ನೀತಿಯ ಹಿತಾಸಕ್ತಿಯನ್ನು ಈಡೇರಿಸುತ್ತದೆಯೇ?



**123=126 ಎಂಬ ಘೋಷಣೆ ಈಗ ಅಮೆರಿಕಾದಲ್ಲಿ ಪ್ರಚಲಿತವಾಗಿದೆಯಂತೆ. ಏನಿದರ ಅರ್ಥ?**

123 ಒಪ್ಪಂದ ಕಾರ್ಯಗತವಾಗುವ ಮೊದಲೇ ಅದನ್ನು ಬಳಸಿ ಅಮೆರಿಕನ್ ಮಿಲಿಟರಿ ಉತ್ಪಾದಕರು ಭಾರತದಿಂದ ರಕ್ಷಣಾ ಕಂಟ್ರಾಕ್ಟುಗಳನ್ನು ದಕ್ಕಿಸಿಕೊಳ್ಳಲು ಯತ್ನಿಸುತ್ತಿದ್ದಾರೆ. ಉದಾಹರಣೆಗೆ ಭಾರತ ಸದ್ಯಕ್ಕೆ 126 ಬಹುಪಾತ್ರಗಳ ಯುದ್ಧ ವಿಮಾನಗಳಿಗೆ ಜಾಗತಿಕ ಟೆಂಡರ್ ಕರೆಯುವ ನಿರೀಕ್ಷೆಯಿದೆ. ಇದು 45,000 ಕೋಟಿ ರೂ.ಗಳ ಬಹುದೊಡ್ಡ ಕಾಂಟ್ರಾಕ್ಟ್ ಆಗಿದ್ದು ವಿಶ್ವದ ವಿಮಾನ ಉತ್ಪಾದಕರೆಲ್ಲಾ ಇದಕ್ಕೆ ಕಾಯುತ್ತಿದ್ದಾರೆ. ಅಮೆರಿಕಾದ ಬೋಯಿಂಗ್ ಮತ್ತು ಲಾಕ್‌ಹೀಡ್-ಮಾರ್ಟಿನ್ ಈ ಪರಮಾಣು ಒಪ್ಪಂದವನ್ನು ಗಾಳವಾಗಿ ಬಳಸಿ ತಮ್ಮ ಎಫ್/ಎ-18 ಹಾಗೂ ಎಫ್-16 ಯುದ್ಧ ವಿಮಾನಗಳನ್ನು ಮಾರಲು ಭಾರೀ ಲಾಬ್ಬಿ ನಡೆಸಿದ್ದಾರೆ. ವಾಸ್ತವವಾಗಿ ಇವು ಭಾರತೀಯ ವಿಮಾನ ಪಡೆಯ ಅಗತ್ಯಗಳಿಗೆ ಹೊಂದಿಕೊಳ್ಳುವುದಿಲ್ಲ. ಈ ಹಿನ್ನೆಲೆಯಲ್ಲಿ 123=126 ಎಂಬ ಘೋಷಣೆ ಹುಟ್ಟಿದೆ. 123 ಒಪ್ಪಂದ ಕೇವಲ ಒಂದು ಪರಮಾಣು ಸಹಕಾರ ಒಪ್ಪಂದವಲ್ಲ, ಅದು ನಮ್ಮ ದೇಶದ ರಕ್ಷಣಾ ವಲಯವನ್ನೂ ತಟ್ಟುತ್ತದೆ ಎಂಬುದಕ್ಕೆ ಸಂಕೇತ ಈ ಘೋಷಣೆ.

ಹಿಂದೆ ಹೇಳಿದ ರಕ್ಷಣಾ ಚೌಕಟ್ಟು ಒಪ್ಪಂದದಲ್ಲಿ ಭಾರತೀಯ ಮತ್ತು ಅಮೆರಿಕನ್ ಸಶಸ್ತ್ರ ಪಡೆಗಳಲ್ಲಿ 'Interoperability' ಅಂದರೆ 'ಪರಸ್ಪರ ಕಾರ್ಯಾಚರಿಸುವ ಸಾಧ್ಯತೆಗಳು' ಇರಬೇಕು ಎನ್ನಲಾಗಿದೆ. ಇದರರ್ಥ ಭಾರತದ ಸಶಸ್ತ್ರ ಪಡೆಗಳು ಅಮೆರಿಕಾದ ಸಶಸ್ತ್ರ ಪಡೆಗಳ ಸಾಧನ-ಶಸ್ತ್ರಾಸ್ತ್ರಗಳನ್ನು ಬಳಸುವಂತಿರಬೇಕು, ಅದೇ ರೀತಿ ಅಮೆರಿಕಾದ ಪಡೆಗಳು ಭಾರತದ ಪಡೆಗಳ ಸಾಧನ-ಶಸ್ತ್ರಾಸ್ತ್ರಗಳನ್ನು ಬಳಸುವಂತಿರಬೇಕು. ಅಂದರೆ ಎರಡೂ ಸೇನೆಗಳು ಒಂದೇ ರೀತಿಯ ಸಾಧನ-ಶಸ್ತ್ರಾಸ್ತ್ರಗಳನ್ನು ಹೊಂದಿರಬೇಕಾಗುತ್ತದೆ. ಇದರ ಅರ್ಥ ಭಾರತ ಅಮೆರಿಕಾದ ಶಸ್ತ್ರಾಸ್ತ್ರಗಳನ್ನೇ, ಅದರಲ್ಲೂ ಬಹಳ ವೆಚ್ಚದಾಯಕವಾದ ಅವರ ವಿಮಾನಗಳನ್ನು, ಕ್ಷಿಪಣಿಗಳನ್ನೇ ಖರೀದಿಸಬೇಕಾಗುತ್ತದೆ.

ರಕ್ಷಣಾ ಮಂತ್ರಾಲಯದ ಅಂದಾಜಿನ ಪ್ರಕಾರ ಭಾರತ 11ನೇ ಯೋಜನೆಯ 2007-2012 ರ ಅವಧಿಯಲ್ಲಿ 30 ಬಿಲಿಯ ಡಾಲರುಗಳು ಅಥವಾ 135,000 ಕೋಟಿ ರೂ.ಗಳ ಮಿಲಿಟರಿ ಖರೀದಿ ನಡೆಸುವ ನಿರೀಕ್ಷೆಯಿದೆ. ಇದರಿಂದ ಭಾರತ ಅಭಿವೃದ್ಧಿಶೀಲ ದೇಶಗಳಲ್ಲೇ ಅತಿ ದೊಡ್ಡ ಶಸ್ತ್ರಾಸ್ತ್ರ ಖರೀದಿಕಾರನಾಗಲಿದೆ. 1960ರ ದಶಕದಿಂದ ಭಾರತದ ಈ ಬೃಹತ್ ಶಸ್ತ್ರಾಸ್ತ್ರ ಮಾರುಕಟ್ಟೆ ಅಮೆರಿಕನ್ ರಕ್ಷಣಾ ಕಂಟ್ರಾಕ್ಟರುಗಳಿಗೆ ಮುಚ್ಚಿತ್ತು. ಇದಕ್ಕೆ ಕಾರಣ, ಆರಂಭದಲ್ಲಿ ಭಾರತ-ಸೋವಿಯತ್ ಒಕ್ಕೂಟ ಮಿತ್ರ ಸಂಬಂಧಗಳ ಬಗ್ಗೆ ಅಮೆರಿಕಾದ ವೈಷಮ್ಯ ನಂತರ 1974ರ ಪೋಖ್ರಾನ್ ಪರೀಕ್ಷಣೆಯ ನಂತರ ಅಮೆರಿಕಾ ಭಾರತದ ಮೇಲೆ ಹಾಕಿದ ನಿರ್ಬಂಧಗಳು. 2001 ರಲ್ಲಿ ಭಾರತ-ಅಮೇರಿಕಾ ರಕ್ಷಣಾ ಪಾಲುದಾರಿಕೆಯ ಮಾತುಕತೆಗಳನ್ನು ಆರಂಭಿಸಿದಾಗ ಈ ನಿರ್ಬಂಧಗಳನ್ನು ತೆಗೆಯಲಾಯಿತು. ಆದ್ದರಿಂದ ದಶಕಗಳ ನಂತರ ತೆರೆದ ಈ ಬೃಹತ್ ಮಾರುಕಟ್ಟೆಯತ್ತ ಅಮೆರಿಕನ್ ರಕ್ಷಣಾ ಉತ್ಪಾದಕರು ಆಸೆಗಣ್ಣುಗಳಿಂದ ನೋಡುತ್ತಿದ್ದಾರೆ. ಅದೂ ಅಮೆರಿಕನ್ ರಕ್ಷಣಾ ಖರೀದಿಗಳು ಇಳಿಮುಖವಾಗಬಹುದು ಎಂಬ ಆತಂಕ ಅಲ್ಲಿನ ಮಿಲಿಟರಿ-ಕೈಗಾರಿಕಾ ಕೂಟವನ್ನು ಬಾಧಿಸುತ್ತಿರುವಾಗ.

ಭಾರತಕ್ಕೆ ಇತ್ತೀಚೆಗೆ ಅಮೆರಿಕಾದ ಅತಿದೊಡ್ಡ ಮಿಲಿಟರಿ ಮಾರಾಟವೆಂದರೆ ಭಾರತೀಯ ನೌಕಾಪಡೆಗೆ ಖರೀದಿಸಿದ ಯುದ್ಧನೌಕೆ 'ಐಎನ್‌ಎಸ್ ಜಲಾಶ್ವ! ಅಮೆರಿಕಾದ ಯುದ್ಧ ನೌಕೆ ಯುಎಸ್‌ಎಸ್ ಟ್ರೆಂಟನ್‌ಗೆ ಹೊಸ ರೂಪ ಕೊಟ್ಟು ಇದನ್ನು ಭಾರತೀಯ ನೌಕಾಪಡೆಗೆ 480 ಮಿಲಿಯನ್ ಡಾಲರು (2160 ಕೋಟಿ ರೂ.ಗಳಿಗೆ) ಮಾರಲಾಯಿತು. ಇನ್ನೊಂದು ದೊಡ್ಡ ಖರೀದಿಯೆಂದರೆ 6 ಹರ್ಕ್ಯುಲಿಸ್ ಸಿ–130ಜೆ ಮಿಲಿಟರಿ ಸಾಗಾಣಿಕೆ ವಿಮಾನಗಳು. ಈ ವ್ಯವಹಾರದ ಮೊತ್ತ 1 ಬಿಲಿಯ ಡಾಲರು ಅಥವಾ 4500 ಕೋಟಿ ರೂ. ಗಳು ಇನ್ನೂ 6 ವಿಮಾನಗಳನ್ನು ಖರೀದಿಸುವ ಅಹ್ವಾನವೂ ಇದೆ. ಇದೇ ರೀತಿ 200 ಮಿಲಿಯ ಡಾಲರುಗಳ ಮೌಲ್ಯದ 12 ಶಸ್ತ್ರಾಸ್ತ್ರ ಪತ್ತೆ ಹಚ್ಚುವ ರಾಡಾರ್‌ಗಳನ್ನು ಅಮೆರಿಕಾದ ರೆಥಿಯಾನ್‌ನಿಂದ ಖರೀದಿಸಲಾಗಿದೆ. ಅಮೆರಿಕಾದ ಲಾಕ್‌ಹೀಡ್–ಮಾರ್ಟಿನ್‌ನಿಂದ 650 ಮಿಲಿಯ ಡಾಲರುಗಳಿಗೆ 8 ಪಿ3–ಸಿ ಓರಿಯನ್ ನೌಕಾ ಕಣ್ಗಾವಲು ವಿಮಾನಗಳನ್ನು ಖರೀದಿಸುವ, ರೇಥಿಯಾನ್‌ನಿಂದ ಪೇಟ್ರಿಯಟ್ ಪಿಎಸಿ–3 ಕ್ಷಿಪಣಿ–ನಿರೋಧಕ ವ್ಯವಸ್ಥೆಗಳನ್ನು ಖರೀದಿಸುವ ಬಗ್ಗೆ ಮಾತುಕತೆಗಳು ನಡೆಯುತ್ತಿವೆ.

ಆದರೆ ಅಮೆರಿಕಾ ಅತ್ಯಾಧುನಿಕ ತಂತ್ರಜ್ಞಾನಗಳನ್ನು, ಶಸ್ತ್ರಾಸ್ತ್ರ ವ್ಯವಸ್ಥೆಗಳನ್ನು ಇನ್ನೂ ತಡೆಹಿಡಿದಿದೆ. ಭಾರತ ಅದರ ಸಾಮರಿಕ ಬುಟ್ಟಿಯಲ್ಲಿ ಬೀಳುವ ವರೆಗೆ ಅದನ್ನು ಕೊಡುವ ಸೂಚನೆಗಳಿಲ್ಲ. ಉದಾಹರಣೆಗೆ, ಪೇಟ್ರಿಯಟ್ ಮಾರಾಟಕ್ಕೆ ಅಮೆರಿಕನ್ ಸರಕಾರ ಇನ್ನೂ ಮಂಜೂರಾತಿ ನೀಡಿಲ್ಲ. ಅದೇ ರೀತಿ ಅರೋ ಕ್ಷಿಪಣಿ ರಕ್ಷಣಾ ವ್ಯವಸ್ಥೆಗೂ ಮಂಜೂರಾತಿ ನೀಡಿಲ್ಲ.

ಭಾರತ ಕೂಡಾ ಅಮೆರಿಕಾ ಶಸ್ತ್ರಾಸ್ತ್ರಗಳಿಗೆ ಉತ್ಪಾದಕರನ್ನು ಇಸ್ರೇಲ್ ಮೂಲಕ ಮಾತಾಡಿಸುತ್ತಿದೆ. ಏಕೆಂದರೆ ಬಹಳಷ್ಟು ಇಸ್ರೇಲಿ ಶಸ್ತ್ರಾಸ್ತ್ರಗಳು ಅಮೆರಿಕಾದೊಂದಿಗೆ ಜಂಟಿಯಾಗಿ ತಯಾರಿಸಿದವುಗಳು ಅಥವ ಅಮೆರಿಕನ್ ಬಿಡಿಭಾಗಗಳನ್ನು ಅವಲಂಬಿಸಿವೆ. ಈಗ ಭಾರತವು ಇಸ್ರೇಲಿನ ಅತಿ ದೊಡ್ಡ ಶಸ್ತ್ರಾಸ್ತ್ರ ರಫ್ತು ಮಾರುಕಟ್ಟೆ ಎಂಬುದನ್ನು ಗಮನಿಸಬೇಕು.

ಇಲ್ಲಿ ಮುಖ್ಯ ಅಂಶವೆಂದರೆ ಭಾರತದ ಭಾರೀ ಪ್ರಮಾಣದ ಶಸ್ತ್ರಾಸ್ತ್ರ ಖರೀದಿಯಲ್ಲಿ ಅಮೆರಿಕಾ ಮತ್ತು ಇಸ್ರೇಲಿ ಕಂಪನಿಗಳು ಅಗಾಧ ಪ್ರಭಾವ ಬೀರಲಾರಂಭಿಸಿವೆ. ಅಮೆರಿಕಾ ಈ ಮಾರುಕಟ್ಟೆಯಲ್ಲಿ ತಡವಾಗಿ ಪ್ರವೇಶಿಸಿದರೂ ಪರಮಾಣು ಒಪ್ಪಂದದಿಂದಾಗಿ ಅದು ಎಲ್ಲರಿಗಿಂತ ಮುಂದೆ ಇದೆ ಎಂದು ಫ್ರೆಂಚ್ ಮತ್ತು ರಶ್ಯನ್ ಪ್ರತಿಸ್ಪರ್ಧಿಗಳು ಬಹಿರಂಗವಾಗಿ ಹೇಳುತ್ತಿದ್ದಾರೆ. ಯುರೋಪಿಯನ್ ಕಂಪನಿಗಳ ಕೂಟ ಯುರೋಕೋಪ್ಟರ್‌ನೊಂದಿಗೆ 17 ಹಗುರ ಹೆಲಿಕಾಪ್ಟರುಗಳ ಖರೀದಿಗೆ 600 ಮಿಲಿಯ ಡಾಲರುಗಳ ಒಂದು ಕಾಂಟ್ರಾಕ್ಟ್ ನೀಡಿಕೆಯ ಪ್ರಕ್ರಿಯೆ ಅಂತಿಮ ಹಂತದಲ್ಲಿತ್ತು. ಇದ್ದಕ್ಕಿದ್ದಂತೆ ಈ ವ್ಯವಹಾರದ ಮೇಲೆ ತಡೆ ಬಿದ್ದಿದೆ. ಅಮೆರಿಕನ್ ಕಂಪನಿ ಬೆಲ್ ನ ಪರವಾಗಿ ಅಮೆರಿಕನ್ ಆಡಳಿತದ ಒತ್ತಡದಿಂದ ಹೀಗಾಗಿದೆಯೆಂದು ಸುದ್ದಿ. ಈ ವರ್ಷದ ಮೇ ತಿಂಗಳಲ್ಲಿ ಬೆಲ್ ಕಂಪನಿಯ ಅಧಿಕಾರಿಗಳು ಅಮೆರಿಕನ್ ಆಡಳಿತದ ಅಧಿಕಾರಿಗಳೊಂದಿಗೆ ಅಮೆರಿಕಾದಲ್ಲಿ ಭಾರತದ ರಾಯಭಾರಿ (ಪರಮಾಣು ವ್ಯವಹಾರವನ್ನು ವಿರೋಧಿಸುವ ಭಾರತದ ಸಂಸತ್ ಸದಸ್ಯರು ಕೋಳಿತಲೆ"ಗಳು ಎಂದು ಹೇಳಿ, ಈಗ ತಾನು ಹಾಗೆ ಹೇಳಿದ್ದು ಮಾಧ್ಯಮದಲ್ಲಿರುವವರಿಗೆ ಎಂದು ಕ್ಷಮೆ ಕೇಳಿದ 'ಖ್ಯಾತಿ'ಯ) ರೋನೆನ್ ಸೇನ್‌ರನ್ನು ಭೇಟಿಯಾದ ಮೇಲೆ ಹೀಗಾಗಿದೆಯಂತೆ.

ಇಲ್ಲಿರುವ ಪ್ರಶ್ನೆ ಭಾರತ ತನ್ನ ಶಸ್ತ್ರಾಸ್ತ್ರಗಳನ್ನು ಬೇರೆ ಬೇರೆ ದೇಶಗಳಿಂದ ಖರೀದಿಸಬೇಕೇ ಬೇಡವೇ ಎಂದಲ್ಲ. ಆದರೆ ಭಾರತದ ಶಸ್ತ್ರಾಸ್ತ್ರ ಖರೀದಿ ಹೆಚ್ಚೆಚ್ಚಾಗಿ ಅಮೆರಿಕಾ ಮತ್ತು ಅದರ ಬಾಲ ಹಿಡಿದಿರುವ ಇಸ್ರೇಲ್‌ಗೆ ಕಟ್ಟು ಬಿದ್ದಂತೆ ಕಾಣುತ್ತಿದೆ. ಇದು ಆತಂಕಕಾರಿ. ಭಾರತ ಸತತವಾಗಿ ಅಮೆರಿಕಾ ಬಯಸಿದಂತೆ ವರ್ತಿಸಬೇಕು, ಇಲ್ಲವಾದರೆ ತನ್ನ ಮಿಲಿಟರಿ ಸಾಮರ್ಥ್ಯಕ್ಕೆ ಧಕ್ಕೆ ತಂದುಕೊಳ್ಳಬೇಕು ಎಂಬ ಪರಿಸ್ಥಿತಿಯನ್ನು ತಂದುಕೊಳ್ಳುತ್ತಿದೆ. ಇಂತಹ ಬ್ಲಾಕ್‌ಮೆಲ್ ನಮ್ಮ ವಿದೇಶಾಂಗ ನೀತಿಯನ್ನು ತಟ್ಟದೇ ಇರುವುದಿಲ್ಲ.

### ❖ ಹೀಗಿದ್ದರೂ ಅಮೇರಿಕಾದೊಂದಿಗೆ ಸಾಮರಿಕ ಪಾಲುದಾರಿಕೆಗೆ ಇಷ್ಟೊಂದು ತವಕ ಏಕೆ?

ಅಮೇರಿಕಾವು ಭಾರತ ಒಂದು 'ಸೂಪರ್ ಪವರ್' ಅಥವಾ ಮಹಾಶಕ್ತಿಯಾಗಲು ನೆರವಾಗುತ್ತದೆ ಎಂಬ ನಂಬಿಕೆಯಿಂದಾಗಿ ಈ ತವಕ. ಇದೊಂದು ಭಾರತೀಯ ನೀತಿನಿರ್ಧಾರಕರ ವಿಕೃತ ಮಹತ್ವಾಕಾಂಕ್ಷೆ. ಏಕೆಂದರೆ ಮಹಾನ್ ಶಕ್ತಿಯಾಗಬೇಕೆಂಬ ಅವರ ಈ ಆಕಾಂಕ್ಷೆ ಅಮೆರಿಕನ್ ಯಜಮಾನಿಕೆಯನ್ನು ಸ್ವೀಕರಿಸುವುದರ ಮೇಲೆ ಮತ್ತು ಭಾರತ 50 ವರ್ಷಗಳಿಗೂ ಹೆಚ್ಚು ಕಾಲ ಅನುಸರಿಸಿಕೊಂಡು ಬಂದ, ವಿಶ್ವದಲ್ಲಿ ಒಂದು ಗೌರವಾನ್ವಿತ ಸ್ಥಾನ ಪಡೆಯುವಂತೆ ಮಾಡಿದ ಅಲಿಪ್ತ ವಿದೇಶಾಂಗ ನೀತಿಯನ್ನು ಕೈಬಿಡುವುದರ ಮೇಲೆ ನಿಂತಿದೆ. ಈ ಆಕಾಂಕ್ಷೆ ಪ್ರಸಕ್ತ ನವ-ಉದಾರೀಕರಣದಿಂದ ಪ್ರಯೋಜನ ಗಿಟ್ಟಿಸಿದ ಒಂದು ಸಣ್ಣ ವಿಭಾಗದ ಕನಸಾಗಿರಬಹುದು, ಆದರೆ ಭಾರತದ ಬಹುಪಾಲು ಜನಸಾಮಾನ್ಯರಿಗೆ ಇಂತಹ ಕನಸು, ಅಮೆರಿಕನ್ ಯಜಮಾನಿಕೆಯನ್ನು ಸ್ವೀಕರಿಸಿದ ವಿದೇಶಾಂಗ ನೀತಿ ಅರ್ಥಹೀನವಷ್ಟೇ ಅಲ್ಲ, ಅವರ ಹಿತಾಸಕ್ತಿಗಳಿಗೂ ಮಾರಕ.

### ❖ ಹೈಡ್ ಆಕ್ಟ್ ಹೇಗೆ ಭಾರತದ ವಿದೇಶಾಂಗ ನೀತಿಯ ಮೇಲೆ ಒತ್ತಡ ಹಾಕುತ್ತದೆ?

ಹೈಡ್ ಆಕ್ಟ್‌ನಲ್ಲಿ ಭಾರತದ ವಿದೇಶಾಂಗ ನೀತಿಯನ್ನು ನೇರವಾಗಿ ಮತ್ತು ಪರೋಕ್ಷವಾಗಿ ಪ್ರಸ್ತಾಪಿಸುವ ಹಲವು ವಿಭಾಗಗಳಿವೆ. ಇರಾನ್ ಕುರಿತಂತೆ ಅಮೆರಿಕಾದ ಹುನ್ನಾರಗಳಿಗೆ ಭಾರತದ ಬೆಂಬಲ ಮತ್ತು ಶಾಮೀಲಿನ ಬಗ್ಗೆ ನೇರ ಪ್ರಸ್ತಾಪಗಳಿವೆ. ಹೈಡ್ ಆಕ್ಟ್‌ನ ಆರಂಭದಲ್ಲೆ ಸೆಕ್ಷನ್ 102ರಲ್ಲಿ (ಅಮೆರಿಕಾದ ಕಾಂಗ್ರೆಸ್‌ನ ಭಾವನೆ) ಅಮೆರಿಕಾ ಸಂಯುಕ್ತ ಸಂಸ್ಥಾನ ಭಾರತದಂತಹ ಒಂದು ಪ್ರಸರಣ ನಿಷೇಧಸಂಧಿಗೆ ಸಹಿ ಹಾಕಿರದ ದೇಶದೊಂದಿಗೆ ಅದು "ಅಮೆರಿಕಾ ಸಂಯುಕ್ತ ಸಂಸ್ಥಾನಗಳ ವಿದೇಶಾಂಗ ನೀತಿಗೆ ಅನುಗುಣವಾದ ಒಂದು ವಿದೇಶಾಂಗ ನೀತಿ ಹೊಂದಿದೆ, ಮತ್ತು ಪ್ರಸರಣ ನಿಷೇಧಕ್ಕೆ ಸಂಬಂದಪಟ್ಟ ಮುಖ್ಯ ವಿದೇಶಾಂಗ ನೀತಿ ನಿರೂಪಣೆಗಳಲ್ಲಿ ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಜೊತೆಗೆ ಕೆಲಸ ಮಾಡುತ್ತದೆ" ಎಂಬ ಆಧಾರದಲ್ಲಿ ಒಂದು ಪರಮಾಣು ಸಹಕಾರ ಒಪ್ಪಂದ ಮಾಡಿಕೊಳ್ಳುತ್ತಿದೆ ಎಂದು ಹೇಳಲಾಗಿದೆ. ಇದು ಭಾರತವು ಅಮೆರಿಕಾದ ಸಾಮರಿಕ ಗುರಿಗಳನ್ನು ಒಪ್ಪಬೇಕೆಂದು ಬಲವಂತ ಮಾಡುವ ಅಂಶವಲ್ಲದೆ ಬೇರೇನು? ಹೈಡ್ ಆಕ್ಟ್‌ನಲ್ಲಿರುವ ಇನ್ನೂ ಕೆಲವು ಅಂಶಗಳನ್ನು ನೋಡಿ:

- ❑ ಭಾರತ ಇರಾನನ್ನು ತಡೆಯುವ, ಏಕಾಂಗಿಯಾಗಿಸುವ ಮತ್ತು ಅಗತ್ಯವಿದ್ದಲ್ಲಿ ನಿರ್ಬಂಧ ಹೇರುವ ಮತ್ತು ನಿಗ್ರಹಿಸುವ ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಮತ್ತು

ಅಂತರಾಷ್ಟ್ರೀಯ ಪ್ರಯತ್ನಗಳಲ್ಲಿ ಪೂರ್ಣವಾಗಿ ಹಾಗೂ ಸಕ್ರಿಯವಾಗಿ ಭಾಗವಹಿಸುತ್ತದೆ" ಎಂಬಿತ್ಯಾದಿ ವಿವಿಧ ವಿದೇಶಾಂಗ ನೀತಿಯ ಪ್ರಶ್ನೆಗಳಲ್ಲಿ ಭಾರತ 'ಸರಿಯಾಗಿ' ವರ್ತಿಸುತ್ತಿದೆ ಎಂದು ಅಮೆರಿಕನ್ ಅಧ್ಯಕ್ಷರು ಪ್ರತಿವರ್ಷ ಅಮೆರಿಕನ್ ಕಾಂಗ್ರೆಸ್‌ಗೆ ಪ್ರಮಾಣ ಪತ್ರ ನೀಡಬೇಕು ಮತ್ತು ವರದಿ ಮಾಡಬೇಕು. (ಸೆಕ್ಸನ್104ಜಿ(2)ಇ(1))

- ಅಮೆರಿಕಾದ ಅತ್ಯಂತ ವಿವಾದಾತ್ಮಕ ಪ್ರಸರಣ ಭದ್ರತಾ ಮುತುವರ್ಜಿಗೆ (Proliferation Security Initiative), ಮತ್ತು ಅಂತರಾಷ್ಟ್ರೀಯ ಸಾಗರ ಪ್ರದೇಶದಲ್ಲಿ ನೌಕೆಗಳನ್ನು ತಡೆದು ನಿಲ್ಲಿಸುವ ಅದರ ಕಾನೂನುಬಾಹಿರ ನೀತಿಗೆ ಕೂಡಾ ಭಾರತದ ಬೆಂಬಲದ ಔಪಚಾರಿಕ ಘೋಷಣೆ ಹಾಗೂ ಅದರಲ್ಲಿ ಭಾಗವಹಿಸಬೇಕು.(ಸೆಕ್ಸನ್ 104 ಜಿ(2)ಕೆ)
- ಭಾರತ ಈಗ ಸಹಿ ಹಾಕಿರದ ವಿವಿಧ ದ್ವಿಪಕ್ಷೀಯ / ಬಹುಪಕ್ಷೀಯ ಒಪ್ಪಂದಗಳಿಗೆ (ಉದಾ: ಅಮೆರಿಕಾದ ಕ್ಷಿಪಣಿ ತಂತ್ರಜ್ಞಾನ ನಿಯಂತ್ರ ವ್ಯವಸ್ಥೆ- ಎಂಟಿಸಿಆರ್, ಆಸ್ಟ್ರೇಲಿಯನ್ ಗ್ರೂಪ್ ಇತ್ಯಾದಿ) ಅದು ಬದ್ಧವಾಗಿರುತ್ತದೆ (ಸೆಕ್ಷನ್ 104ಸಿ ಎ,ಎಫ್,ಜಿ)
- ಇವೆಲ್ಲಾ ಈ ಕಾನೂನಿನ ಬಂಧಕವಲ್ಲದ (non-binding) ವಿಭಾಗಗಳು, ಆದ್ದರಿಂದ ಭಾರತ ಇವಕ್ಕೆಲ್ಲಾ ಸೊಪ್ಪು ಹಾಕಬೇಕಿಲ್ಲ ಎಂದು ವಾದಿಸಲಾಗುತ್ತಿದೆ. ಆದರೆ ಈ ಕಾನೂನಿನ ಪ್ರಕಾರ ಭಾರತವು ಹೈಡ್ ಆಕ್ಟ್ ಪ್ರಕಾರ ವರ್ತಿಸುತ್ತಿದೆಯೇ ಇಲ್ಲವೇ ಎಂದು ಅಮೆರಿಕನ್ ಕಾಂಗ್ರೆಸ್‌ಗೆ ಪ್ರತಿವರ್ಷ ಪ್ರಮಾಣಪತ್ರ ಕೊಡಬೇಕಾಗಿದೆ ಎಂಬ ಸಂಗತಿಯನ್ನು ಬೇಕೆಂದೇ ಉಪೇಕ್ಷಿಸಲಾಗುತ್ತಿದೆ. ಇಂತಹ ಪ್ರಮಾಣ ಪತ್ರ ಬರದಿದ್ದರೆ, ಅಥವಾ ಕಾಂಗ್ರೆಸ್‌ಗೆ ಅಮೆರಿಕನ್ ಅಧ್ಯಕ್ಷರ ಪ್ರಮಾಣಪತ್ರದಿಂದ ತೃಪ್ತಿಯಾಗದಿದ್ದರೆ ಅಮೆರಿಕನ್ ಕಾಂಗ್ರೆಸ್ ನಾಗರಿಕ ಪರಮಾಣು ಸಹಕಾರದ 123 ಒಪ್ಪದವನ್ನು ಅಮಾನತುಗೊಳಿಸಲು ಅಥವಾ ಅಂತ್ಯಗೊಳಿಸಲು ಕ್ರಮಗಳನ್ನೂ ಕೈಗೊಳ್ಳಬಹುದು. ಅಂದರೆ ಭಾರತದ ವಿದೇಶಾಂಗ ನೀತಿಯ ಮೇಲೆ ನಿರಂತರ ಒತ್ತಡದ ಮೂಲವಾಗಿ ಅಮೆರಿಕಾ ಈ ಹೈಡ್‌ಆಕ್ಟ್‌ನ್ನು ಅಥವಾ ಅಮೆರಿಕನ್ ಕಾಂಗ್ರೆಸನ್ನು ಬಳಸಬಹುದು. ಪರಮಾಣು ಸರಕಾರದ ಒಪ್ಪಂದದಲ್ಲಿ ನಾವು ಹೆಚ್ಚೆಚ್ಚು ಆಳವಾಗಿ ಒಳಗೊಂಡು ಆಮದು ಮಾಡಿದ ಪರಮಾಣು ರಿಯಾಕ್ಟರುಗಳ ಮೇಲೆ, ಇಂಧನದ ಮೇಲೆ ಹೆಚ್ಚೆಚ್ಚು ಹಣ ಹೂಡಿಕೆ ಮಾಡಿದಷ್ಟು ನಮ್ಮ ವಿದೇಶಾಂಗ ನೀತಿಯ ಮೇಲಿನ ಒತ್ತಡವೂ ಹೆಚ್ಚುತ್ತಾ ಹೋಗುತ್ತದೆ.

**❖ ವಾರ್ಷಿಕ ಪ್ರಮಾಣಪತ್ರದ ಪ್ರಸ್ತಾಪವೇ 123 ಒಪ್ಪಂದದಲ್ಲಿ ಇಲ್ಲ ಎಂದು ಪ್ರಧಾನ ಮಂತ್ರಿಗಳು ಸಮಜಾಯಿಷಿ ನೀಡಿದ್ದಾರಲ್ಲಾ? ಅದನ್ನು ಈಗ ಕೈಬಿಡಲಾಗಿಲ್ಲವೇ? ಹೈಡ್ ಆಕ್ಟ್‌ನಲ್ಲಿ ಕಳಕೊಂಡದ್ದನ್ನು ಈ ಒಪ್ಪಂದದಲ್ಲಿ ಮರಳಿ ಪಡೆಯಲಾಗಿದೆ ಎನ್ನುತ್ತಾರಲ್ಲಾ?**

ಇದೊಂದು ಟೊಳ್ಳು ಸಮಜಾಯಿಷಿ. ವಾರ್ಷಿಕ ಪ್ರಮಾಣ ಪತ್ರ ಮತ್ತು ವರದಿ ಅಮೆರಿಕನ್ ಅಧ್ಯಕ್ಷರು ಅಮೆರಿಕನ್ ಕಾಂಗ್ರೆಸ್‌ಗೆ ನೀಡಬೇಕಾದ್ದು. ಅದು ಅನ್ವಯಿಸುವ ಬಗ್ಗೆ 123 ಒಪ್ಪಂದದ ಪಠ್ಯದಲ್ಲಿ ಇರಬೇಕಾಗಿಲ್ಲ. ಆದರೆ ಆ ಶರತ್ತಂತೂ ಇದ್ದೇ ಇರುತ್ತದೆ.

123 ಒಪ್ಪಂದಲ್ಲಿಯೇ ಹೈಡ್ ಆಕ್ಟ್ ಹೇಗೆ ಅನ್ವಯವಾಗುತ್ತದೆ ಎಂದಿದೆ. ಕಲಮು 2.1 "ಪ್ರತಿಯೊಂದು ಪಕ್ಷ ಈ ಒಪ್ಪಂದವನ್ನು ತಂತಮ್ಮ ಅನ್ವಯವಾಗುವ ಸಂಧಿಗಳು, ರಾಷ್ಟ್ರೀಯ ಕಾನೂನುಗಳು, ಶಾಂತಿಯುತ ಬಳಕೆಗೆ ಪರಮಾಣು ಶಕ್ತಿಯ ಉಪಯೋಗಕ್ಕೆ ಸಂಬಂಧಪಟ್ಟ ನಿಯಂತ್ರಣಗಳು ಮತ್ತು ಲೈಸೆನ್ಸ್ ಆವಶ್ಯಕತೆಗಳಿಗೆ ಅನುಗುಣವಾಗಿ ಅನುಷ್ಠಾನಗೊಳಿಸುತ್ತದೆ"ಎಂದು ಹೇಳುತ್ತದೆ. ಇಲ್ಲಿ 'ರಾಷ್ಟ್ರೀಯ ಕಾನೂನುಗಳು" ಎಂಬುದನ್ನು ಗಮನಿಸಬೇಕು. ಆದ್ದರಿಂದ 123 ಒಪ್ಪಂದ ಮತ್ತು ಹೈಡ್ ಆಕ್ಟ್ ಬೇರೆ-ಬೇರೆ ಎಂದೋ, ಅಥವಾ 123 ಒಪ್ಪಂದ ಹೈಡ್ ಆಕ್ಟ್‌ನ್ನು ರದ್ದು ಪಡಿಸುತ್ತದೆ ಎಂದೋ ಭಾರತೀಯ ಸರಕಾರದ ವಕ್ತಾರರ ಸಮಜಾಯಿಷಿಗಳು ಅಸಮರ್ಥನೀಯ.

ಹೈಡ್ ಆಕ್ಟ್‌ನಲ್ಲಿ ಕಳಕೊಂಡದ್ದನ್ನು 123 ಒಪ್ಪಂದದಲ್ಲಿ ಮರಳಿ ಪಡೆಯಲಾಗಿದೆ ಎಂಬುದು ಅರ್ಥಹೀನ. ಏಕೆಂದರೆ ಮೇಲೆ ಹೇಳಿದಂತೆ 123 ಒಪ್ಪಂದವನ್ನು ರಾಷ್ಟ್ರೀಯ ಕಾನೂನುಗಳಿಗೆ ಅನುಗುಣವಾಗಿ ಅನುಷ್ಠಾನಗೊಳಿಸಲಾಗುವುದು. ಅಮೆರಿಕಾದ ಸಂದರ್ಭದಲ್ಲಿ ಹೈಡ್ ಆಕ್ಟ್ ಮತ್ತು ಅಲ್ಲಿನ ಪರಮಾಣು ಶಕ್ತಿ ಕಾನೂನುಗಳೇ 'ರಾಷ್ಟ್ರೀಯ ಕಾನೂನುಗಳು'. 123 ಒಪ್ಪಂದ ಈ ಕಾನೂನುಗಳಿಗೆ ಒಳಪಡುತ್ತದೆ ಎಂಬುದು ಸ್ಪಷ್ಟ.



**ಈ ಒಪ್ಪಂದ ಭಾರತದ ವಿದ್ಯುತ್ ಭದ್ರತೆಯನ್ನು ಬಲಪಡಿಸಲು ನೆರವಾಗುತ್ತದೆ ಎಂದು ಪ್ರಧಾಮಂತ್ರಿಗಳು ಹೇಳಿದ್ದಾರೆ. ಈ ಒಪ್ಪಂದ ಕಾರ್ಯಗತವಾದರೆ ಭಾರತದ ಪ್ರತಿ ಮನೆಗೆ ವಿದ್ಯುತ್ ಸಿಗುತ್ತದೆ ಎಂದು ಸರಕಾರೀ ಏಜೆಂಸಿಗಳು ಹೇಳುತ್ತಿವೆ. ವಾಸ್ತವ ಸಂಗತಿಯೇನು?**

ಭಾರತದಲ್ಲಿ ವಿದ್ಯುತ್ತಿನ ಭಾರೀ ಆಭಾವವಿದೆ ಎಂಬುದೇನೋ ನಿಜ. ಆದರೆ ಇಲ್ಲಿ ಏಳುವ ಪ್ರಶ್ನೆಯೆಂದರೆ ನಮ್ಮ ಒಟ್ಟು ವಿದ್ಯುತ್ ಉತ್ಪಾದನೆಯಲ್ಲಿ ಪರಮಾಣು ಶಕ್ತಿಯ ಮಹತ್ವ ಈ ಒಪ್ಪಂದದ ಸಂದರ್ಭದಲ್ಲಷ್ಟೇ ಏಕೆ ಚರ್ಚೆಗೆ ಬಂದಿದೆ? ಪರಮಾಣು ಶಕ್ತಿ ಭಾರತದ ಭವಿಷ್ಯಕ್ಕೆ ಅಷ್ಟೊಂದು ಮಹತ್ವದ್ದಾಗಿದ್ದರೆ ಈ ಬಗ್ಗೆ ಯಾವುದೇ ಗಂಭೀರವಾದ ತಾಂತ್ರಿಕ-ಆರ್ಥಿಕ ಅಧ್ಯಯನವನ್ನು ಇದುವರೆಗೂ ನಡೆಸಿಲ್ಲವೇಕೆ?

ವಿದ್ಯುತ್ ವಲಯದಲ್ಲಿನ ಬಿಕ್ಕಟ್ಟು ಇದ್ದಕ್ಕಿದ್ದಂತೆ ಬಂದಿಲ್ಲ ಅಥವಾ ತಾನಾಗಿಯೇ ಉಂಟಾದ್ದಲ್ಲ. ಇದು ಸರಕಾರಗಳು ಅನುಸರಿಸಿಕೊಂಡು ಬಂದ ವಿದ್ಯುತ್ ನೀತಿಯ ದುಷ್ಫಲ. ಮೊದಲು ಈ ವಲಯದಲ್ಲಿ ಸಾರ್ವಜನಿಕ ಹೂಡಿಕೆಯನ್ನು ಮೊಟಕುಗೊಳಿಸಲಾಯಿತು. ನಂತರ ಅದರಿಂದ ವಿದ್ಯುತ್ ಕೊರತೆ ಕಂಡು ಬಂದಾಗ ಅದನ್ನೇ ನೆವಮಾಡಿಕೊಂಡು ವಿದ್ಯುತ್ ವಲಯದ ಖಾಸಗೀಕರಣಕ್ಕೆ ಕೈಹಾಕಲಾಯಿತು. ಇದರ ಪರಿಣಾಮವೆಂದರೆ, ಒಂದೆಡೆ ಜನಸಾಮಾನ್ಯರಿಗೆ ಏರಿದ ವಿದ್ಯುತ್ ದರಗಳ ಹೊರೆ, ಇನ್ನೊಂದೆಡೆ ರಾಜ್ಯ ವಿದ್ಯುಚ್ಛಕ್ತಿ ಮಂಡಳಿಗಳ ದಿವಾಳಿ. 90ರ ದಶಕದಲ್ಲಿ ಇದ್ದ ಕೊರತೆಯ ಪರಿಸ್ಥಿತಿ ಸುಧಾರಿಸುವ ಬದಲು ಅದಿಂದು ಒಂದು ಪೂರ್ಣ ಪ್ರಮಾಣದ ಬಿಕ್ಕಟ್ಟಿನ ಸ್ವರೂಪ ಪಡೆಯುವಂತಾಗಿದೆ.

ನಮ್ಮ ವಿದ್ಯುತ್ ಉತ್ಪಾದನೆಯ ಸಾಮರ್ಥ್ಯವನ್ನು ತಕ್ಷಣವೇ ಹೆಚ್ಚಿಸಬೇಕೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ಮತ್ತೆ ಏಳುವ ಪ್ರಶ್ನೆ ಇದಕ್ಕೆ ಪರಮಾಣು ಶಕ್ತಿಯೇ ಏಕಮಾತ್ರ ದಾರಿಯೇ?

ಈಗ ನಮ್ಮ ವಿದ್ಯುತ್ ಉತ್ಪದನಾ ಸಾಮರ್ಥ್ಯ ಸುಮಾರು 143,000 ಮೆಗಾವಾಟ್, ಇದರಲ್ಲಿ ತಾಪ, ಜಲ, ಅನಿಲ ಹಾಗೂ ಪರಮಾಣು ವಿದ್ಯುತ್ ಎಲ್ಲವೂ ಸೇರಿವೆ. ಒಂದು ಮೆಗಾವಾಟ್ ವಿದ್ಯುತ್ ಸುಮಾರು 8000–10,000 ಮನೆಗಳ ವಿದ್ಯುತ್ ಅಗತ್ಯಗಳನ್ನು ಪೂರೈಸಬಲ್ಲದು. ಪರಮಾಣು ವಿದ್ಯುತ್ ಉತ್ಪಾದನೆಯ ಪ್ರಮಾಣ ಕೇವಲ 4120 ಮೆಗಾವಾಟ್, ಅಂದರೆ ಒಟ್ಟು ಸಾಮರ್ಥ್ಯ 3%ಕ್ಕಿಂತಲೂ ಕಡಿಮೆ. ಕಲ್ಲಿದ್ದಲು ಆಧಾರಿತ ಅಂದರೆ ತಾಪ ವಿದ್ಯುತ್ ಪ್ರಮಾಣ ಸುಮಾರು 55%, ಜಲವಿದ್ಯುತ್ತಿನ ಪ್ರಮಾಣ ಸುಮಾರು 25%.

ಭಾರತದಲ್ಲಿ ಮುಂದಿನ ಕನಿಷ್ಟ 100ವರ್ಷಗಳಿಗಾಗುವಷ್ಟು ಕಲ್ಲಿದ್ದಲು ಇದೆ. ಜಲವಿದ್ಯುತ್ತಿನ ಸಂಪನ್ಮೂಲಗಳೂ ಸಾಕಷ್ಟಿವೆ. ನೇಪಾಳದೊಂದಿಗೆ ಸಹಕರಿಸಿ ಜಲವಿದ್ಯುತ್ತಿನ ಪ್ರಮಾಣವನ್ನು ಮತ್ತಷ್ಟು ಹೆಚ್ಚಿಸಬಹುದು. ಕಾವೇರಿ–ಗೋದಾವರಿ ಜಲಾನಯನ ಪ್ರದೇಶದಲ್ಲಿ ಇತ್ತೀಚೆಗೆ ಅನಿಲದ ಶೋಧನೆ ಇನ್ನೊಂದು ಮೂಲವನ್ನು ಒದಗಿಸಿದೆ. ಹೀಗೆ ಪರಮಾಣು ಶಕ್ತಿ ವಿದ್ಯುತ್ ಉತ್ಪಾದನೆಯನ್ನು ಹೆಚ್ಚಿಸುವ ಏಕೈಕ ಮೂಲವೇನಲ್ಲ. ಇವುಗಳಲ್ಲಿ ಯಾವುದನ್ನು ಎಷ್ಟು ಬಳಸಬಹುದು ಎಂಬುದು ಇದಕ್ಕೆ ತಗಲುವ ವೆಚ್ಚದ ಮೇಲೆ ಅವಲಂಬಿಸಿದೆ. ಪರಿಣಿತರ ಲೆಕ್ಕಾಚಾರದ ಪ್ರಕಾರ ಒಂದು ಕಲ್ಲಿದ್ದಲು ಆಧಾರಿತ ವಿದ್ಯುತ್ ಸ್ಥಾವರದಲ್ಲಿ ವಿದ್ಯುತ್ತನ್ನು ಯುನಿಟಿಗೆ ರೂ.2.50 ವೆಚ್ಚದಲ್ಲಿ ತಯಾರಿಸ ಬಹುದಾದರೆ, ಪರಮಾಣು ವಿದ್ಯುತ್ತಿನ ಉತ್ಪಾದನೆಗೆ ಯುನಿಟ್ಟಿಗೆ 5.10 ರೂ. ನಿಂದ 5.50 ರೂ.ವರೆಗೆ ಖರ್ಚು ತಗಲುತ್ತದೆ. ಅಷ್ಟೇ ಅಲ್ಲ, ಒಂದು ಆಮದಾದ ಪರಮಾಣು ರಿಯಾಕ್ಟರ್‌ನಿಂದ ಪರಮಾಣು ವಿದ್ಯುತ್ ಸ್ಥಾವರ ನಿರ್ಮಿಸಲು ಕಲ್ಲಿದ್ದಲು–ಆಧಾರಿತ ಸ್ಥಾವರಕ್ಕಿಂತ ಮೂರು ಪಟ್ಟು ಹೆಚ್ಚು ಖರ್ಚಾಗುತ್ತದೆ. ವಿದ್ಯುತ್ ಸಚಿವಾಲಯದ ಪ್ರಕಾರ ಮುಂದಿನ 10ವರ್ಷಗಳಲ್ಲಿ ಇನ್ನೂ 1,00,000 ಮೆಗಾವಾಟ್ ವಿದ್ಯುತ್ ಉತ್ಪಾದನಾ ಸಾಮರ್ಥ್ಯ ನಿರ್ಮಿಸಬೇಕಾಗುತ್ತದೆ. ಇದರಲ್ಲಿ ಪರಮಾಣು ವಿದ್ಯುತ್ತಿನ ಪಾಲೆಷ್ಟು? ಯೋಜನಾ ಆಯೋಗದ ಪ್ರಕಾರ ಹೆಚ್ಚೆಂದರೆ 2015 ರ ವೇಳೆಗೆ 15,000 ಮೆಗಾವಾಟ್, 2021ರ ವೇಳೆಗೆ 29,000 ಮೆಗಾವಾಟ್. ಇತ್ತೀಚೆಗೆ ಸರಕಾರ 2020ರ ವೇಳೆಗೆ 40000 ಮೆಗಾವಾಟ್ ಪರಮಾಣು ವಿದ್ಯುತ್ ಉತ್ಪಾದಿಸಲಾಗುತ್ತದೆ ಎಂದು ಹೇಳಿಕೊಂಡಿದೆ. ಈ ಸಂಖ್ಯೆಯನ್ನು ತಗೊಂಡರೂ ಆಗಲೂ ಪರಿಮಾಣು ವಿದ್ಯುತ್ತಿನ ಪ್ರಮಾಣ ಒಟ್ಟು ವಿದ್ಯುತ್ ಉತ್ಪಾದನೆಯಲ್ಲಿ 9%ವನ್ನು ಮೀರುವುದಿಲ್ಲ. ಅಲ್ಲದೆ 40,000 ಮೆಗಾವಾಟ್ ಪರಮಾಣು ವಿದ್ಯುತ್ ಉತ್ಪಾನೆಯ ಗುರಿ ಕಾರ್ಯಸಾಧ್ಯವೂ ಅಲ್ಲ, ಅತಿ ಹೆಚ್ಚೆಂದರೆ ಅದು ಯೋಜನಾ ಆಯೋಗ ಹೇಳಿರುವ 29,000 ಮೆಗಾವಾಟ್ ತಲುಪಬಹುದಷ್ಟೇ ಎಂದು ಹೇಳಲಾಗುತ್ತದೆ. ಇದು ಒಟ್ಟು ವಿದ್ಯುತ್ತಿನ 7% ರಷ್ಟಾಗುತ್ತದೆ.

ಇರಲಿ, 40,000 ಮೆಗಾವಾಟ್ ಎಂದೇ ಇಟ್ಟುಕೊಳ್ಳೋಣ (ಇದರಲ್ಲಿ 20,000 ಮೆಗಾವಾಟ್ ಅಮೆರಿಕಾದ ರಿಯಾಕ್ಟರುಗಳ ಮೂಲಕ ಆಗಬೇಕು). ಇದಕ್ಕೆ ಒಟ್ಟು 4,00,000 ಕೋಟಿ ರೂ.ಗಳ ಹೂಡಿಕೆ ಮಾಡಬೇಕಾಗುತ್ತದೆ. ಇದು ನಾವು ಮುಂದಿನ 10ವರ್ಷಗಳಲ್ಲಿ ನಿರ್ಮಿಸಬೇಕಾದ ಇಡೀ 1,00,000 ಮೆಗಾವಾಟ್ ವಿದ್ಯುತ್‌ಗಾಗಿ ಯೋಜಿಸಿರುವ ಹಣ.

ಇಲ್ಲಿ ನಾವು ಎನ್ರೋನ್ ವಿದ್ಯುತ್ತಿನ ಅನುಭವನ್ನು ನೆನಪಿಸಿಕೊಳ್ಳಬೇಕಾಗಿದೆ. ಆಗ ಭಾರತ ಖಾಸಗೀ ವಿದ್ಯುತ್ ಉತ್ಪಾದನೆಯ ಮೊರೆ ಹೋಗಲೇಬೇಕಾಗಿದೆ ಎನ್ನಲಾಯಿತು. ವಾಸ್ತವವಾಗಿ ಇದು ಎನ್ರೋನ್‌ಗೆ ನೆರವಾಗಲು ಎಂಬುದು ಈಗ ಬಯಲಾಗಿದೆ. ಎನ್ರೋನ್

ವಿದ್ಯುತ್ ಉತ್ಪಾದನೆ ಆರಂಭಿಸಿದಾಗ ಅದರ ವೆಚ್ಚ ಯುನಿಟ್ಟಿಗೆ 5 ರಿಂದ 7 ರೂ.ವರೆಗೆ ತಲುಪಿತು. ಮಹಾರಾಷ್ಟ್ರ ವಿದ್ಯುತ್ ಮಂಡಳಿಯನ್ನೆ ಅದು ಮುಳುಗಿಸಿತು. ಈಗ ವಿದ್ಯುತ್ ಭದ್ರತೆಯ ಹೆಸರಿನಲ್ಲಿ ಆಮದಾದ ಪರಮಾಣು ರಿಯಾಕ್ಟರುಗಳನ್ನು ನಮ್ಮ ಮೇಲೆ ಹೇರುವ ಹುನ್ನಾರ ನಡೆದಿದೆ. ಎನ್ರೋನ್‌ನ 2000 ಮೆಗಾವಾಟ್ ಸ್ಥಾವರ ದೇಶದ ಅತಿ ದೊಡ್ಡ ವಿದ್ಯುತ್ ಮಂಡಳಿಯನ್ನು ಮುಳುಗಿಸಿದ್ದನ್ನು ನೆನಪಿಸಿಕೊಂಡಾಗ ಈ ವಿಪರೀತ ವೆಚ್ಚದ 40,000 ಮೆಗಾವಾಟ್ ಎಂತಹ ಪರಿಣಾಮ ಬೀರಬಹುದು ಎಂಬುದು ಊಹೆಗೆ ಬಿಟ್ಟ ಸಂಗತಿ.



## ಹಾಗಿದ್ದರೆ ನಮಗೆ ಪರಮಾಣು ವಿದ್ಯುತ್ ಸ್ಥಾವರಗಳು ಬೇಕಿಲ್ಲವೇ?

ನಿಜ, ನಮಗೆ ಪರಮಾಣು ಸ್ಥಾವರಗಳು ಬೇಕು, ಅದರಲ್ಲೂ ಹಣಹೂಡಬೇಕು. ಪೋಖ್ರಾನ್ ಸ್ಫೋಟದ ನಂತರ ನಮ್ಮ ಮೇಲೆ ನಿರ್ಬಂಧಗಳು ಬಂದ ಮೇಲೆ ನಮಗೆ ಎಲ್ಲಿಂದಲೂ ಪರಮಾಣು ಸ್ಥಾವರಗಳಿಗೆ ತಂತ್ರಜ್ಞಾನ ಸಿಗಲಿಲ್ಲ. ನಮ್ಮ ವಿಜ್ಞಾನಿಗಳು, ತಂತ್ರಜ್ಞರು ನಮ್ಮ ಪರಮಾಣು ತಂತ್ರಜ್ಞಾನದ ಪ್ರತಿಯೊಂದು ಅಂಶವನ್ನು ಬಹಳ ಶ್ರಮಪಟ್ಟು ದೇಶದಲ್ಲೇ ಅಭಿವೃದ್ಧಿ ಪಡಿಸಿದರು. ಇದಕ್ಕೆ ನಮಗೆ 20 ವರ್ಷಗಳು ಹಿಡಿದವು. ಇದನ್ನು ಇನ್ನಷ್ಟು ಪೋಷಿಸಿ ಅಭಿವೃದ್ಧಿ ಪಡಿಸಿಬೇಕು. ಈಗ ಪರಮಾಣು ವಿದ್ಯುತ್ ಬಹಳ ವೆಚ್ಚದಾಯಕವಾಗಿದ್ದರೂ ಮುಂದೊಂದು ದಿನ ಕಲ್ಲಿದ್ದಲು, ತೈಲ ನಿಕ್ಷೇಪಗಳು ಖಾಲಿಯಾಗಲಾರಂಭಿಸಿದಾಗ ಪರಮಾಣು ಶಕ್ತಿ ಹೆಚ್ಚೆಚ್ಚು ಮಹತ್ವ ಪಡೆಯಬಹುದು. ಆದರೆ ಅದಕ್ಕಾಗಿ ಈಗಲೇ ನಮ್ಮಲ್ಲಿರುವ ಹಣವನ್ನೆಲ್ಲಾ ಆಮದು ಮಾಡಿದ ರಿಯಾಕ್ಟರುಗಳ ಮೇಲೆ ಸುರಿಯುವುದು ದೂರ ದೃಷ್ಟಿಯ ಕ್ರಮವಾಗದು. ಏಕೆಂದರೆ ಕಲ್ಲಿದ್ದಲು, ಜಲ ಇತ್ಯಾದಿ ಸ್ವರೂಪದ ವಿದ್ಯುತ್ತಿಗೆ ಮಾಡಬೇಕಾದ ಅಥವಾ ರಸ್ತೆ, ರೈಲು, ಶಿಕ್ಷಣ, ಆರೋಗ್ಯಕ್ಕೆ ಖರ್ಚು ಮಾಡಬೇಕಾದ ಹಣವನ್ನು ವಿಪರೀತವಾಗಿ ಕಡಿತ ಮಾಡಿದರೆ ಮಾತ್ರ ಇದು ಸಾಧ್ಯ ತಾನೆ?

ಭಾರತ ಸರಕಾರಕ್ಕೆ ಕಳೆದ 15 ವರ್ಷಗಳಿಂದ ವಿದ್ಯುತ್ ವಲಯದಲ್ಲಿ ಹೂಡಲು ಹಣ ಪಡೆಯಲು ಸಾಧ್ಯವಾಗಿಲ್ಲ. 7ನೇ ಯೋಜನೆಯಲ್ಲಿ 21,000 ಮೆಗಾವಾಟ್ ಸಾಮರ್ಥ್ಯವನ್ನು ಸೇರಿಸಲಾಗಿತ್ತು. ನಂತರದ ಮೂರು ಯೋಜನೆಗಳಲ್ಲಿ 20000 ಮೆಗಾವಾಟ್‌ನಷ್ಟು ಸಾಮರ್ಥ್ಯ ಹೆಚ್ಚಿಲ್ಲ. ಹಣ ಇಲ್ಲ, ಏನು ಮಾಡುವುದು ಎಂದು ಸರ್ಕಾರ ಕೈಕಟ್ಟಿ ಕುಳಿತ್ತಿತ್ತು. ಈಗ ಇದ್ದಕ್ಕಿಂದ್ದಂತೆ ವಿದ್ಯುತ್ ವಲಯಕ್ಕೆ ಮಾತ್ರ ವಲ್ಲ, ಅದರಲ್ಲೂ ಅತ್ಯಂತ ವೆಚ್ಚದಾಯಕ ವಿದ್ಯುತ್ ಉತ್ಪಾದನೆಗೆ ಹಣ ಇದೆಯೇ? ಈಗ ಇದ್ದಕ್ಕಿಂದ್ದಂತೆ ಪರಮಾಣು ಶಕ್ತಿಯ ಬಗ್ಗೆ ಪ್ರೀತಿ ಉಕ್ಕಿರುವುದು ವಿದ್ಯುತ್ತಿಗಾಗಿ ಅಲ್ಲ, ಭಾರತ– ಅಮೇರಿಕಾ ಪರಮಾಣು ವ್ಯವಹಾರದ ಸಮರ್ಥನೆಗಾಗಿಯಷ್ಟೇ ಎಂಬ ಸಂದೇಹ ಮೂಡಲು ಬಹಳ ಅವಕಾಶಗಳಿವೆ.

ಇಲ್ಲಿ ಇನ್ನೊಂದು ಸಮಸ್ಯೆಯೂ ಇದೆ. ಭಾರತದ ಪ್ರಸಿದ್ದ ಅಣು ವಿಜ್ಞಾನಿ ಹೋಮಿ ಭಾಭಾರವರ ನೇತೃತ್ವದಲ್ಲಿ ಆರಂಭವಾದ 3–ಹಂತಗಳ ಪರಮಾಣು ಕಾರ್ಯಕ್ರಮಗಳಲ್ಲಿ ದೇಶೀ ಇಂಧನವನ್ನೇ ಬಳಸಲಾಗುತ್ತದೆ. ಆದರೆ. ಆಮದು ಮಾಡಿದ ರಿಯಾಕ್ಟರುಗಳಲ್ಲಿ

ಯುರೇನಿಯಂನ್ನು ದೊಡ್ಡ ಪ್ರಮಾಣದಲ್ಲಿ ಆಮದು ಮಾಡಬೇಕಾಗುತ್ತದೆ. 3–ಹಂತದ ಆವೃತ್ತ ಫಾಸ್ಟ್ ಬ್ರೀಡರ್ ರಿಯಾಕ್ಟರುಗಳನ್ನು ಬಳಸಿ ಇಂಧನವನ್ನು ಮತ್ತೆ ಬಳಸುವಂತೆ ಮಾಡಿ 50 ಪಟ್ಟು ಹೆಚ್ಚು ಶಕ್ತಿ ಉತ್ಪಾದಿಸಲು ಸಾಧ್ಯ. ಈ ತಂತ್ರಜ್ಞಾನದಲ್ಲಿ ಭಾರತ ವಿಶ್ವದಲ್ಲೇ ಎಲ್ಲರಿಗಿಂತ ಮುಂದಿದ್ದು ಇದರ ವಾಣಿಜ್ಯ ಬಳಕೆ ಇನ್ನೇನು ಆರಂಭವಾಗುವ ಮಟ್ಟ ತಲುಪಿದೆ.

❖ **ವಿದ್ಯುಚ್ಛಕ್ತಿ ದೇಶದ ಒಟ್ಟು ಇಂಧನ ಆವಶ್ಯಕತೆಗಳ ಒಂದು ಭಾಗವಷ್ಟೇ. ಈ ಇಂಧನ ಭದ್ರತೆ ಒದಗಿಸಲು ಈ ಒಪ್ಪಂದ ನೆರವಾಗುತ್ತದೆಯೇ ಅಥವಾ ಅಡ್ಡಿಯಾಗುತ್ತದೆಯೇ?**

ಹೌದು, ವಿದ್ಯುಚ್ಛಕ್ತಿ ನಮ್ಮ ಒಟ್ಟು ಇಂಧನ ಆವಶ್ಯಕತೆಯ ಒಂದು ಭಾಗವಷ್ಟೆ. ಸಾರಿಗೆಗೆ, ರಸಗೊಬ್ಬರ ಮತ್ತು ಪ್ಲಾಸ್ಟಿಕ್‌ಗಳ ತಯಾರಿಕೆಗೆ ಮತ್ತು ಮನೆಬಳಕೆಗೂ ಭೂಪದರದಿಂದ ಅಗೆದು ತೆಗೆಯುವ ಇಂಧನಗಳ ಅವಶ್ಯಕತೆಯಿದೆ. ಇಲ್ಲಿ ಇನ್ನೂ ಬಹಳ ವರ್ಷಗಳ ವರೆಗೆ ಪರಮಾಣು ಶಕ್ತಿಯ ಪಾತ್ರ ಬಹಳ ಕಡಿಮೆ. ಸದ್ಯಕ್ಕೆ ತೈಲ ಮತ್ತು ಅನಿಲದ ಬಳಕೆ ಗರಿಷ್ಟ ಒಟ್ಟು ಶಕ್ತಿ (energy) ಬಳಕೆಯಲ್ಲಿ 44.9% (ತೈಲ 36% ಮತ್ತು ನೈಸರ್ಗಿಕ ಅನಿಲ 8–9%). ಈ ಬಳಕೆ ದೊಡ್ಡ ಪ್ರಮಾಣದಲ್ಲಿ ಹೆಚ್ಚಲಿದೆ. ಈಗ ಈ ಆವಶ್ಯಕತೆಗಳಲ್ಲಿ 70% ಆಮದು ಮಾಡಿಕೊಳ್ಳಬೇಕಾಗಿದೆ. ಇದು 2015ರ ವೇಳೆಗೆ 80% ತಲುಪುವ ಸಾಧ್ಯತೆಯಿದೆ. ಈ ಆಮದು ಸಂಪೂರ್ಣವಾಗಿ ಪಶ್ಚಿಮ ಏಶ್ಯಾದಿಂದಲೇ ಬರಬೇಕು. ಆದ್ದರಿಂದ ಪಶ್ಚಿಮ ಏಶ್ಯಾದಲ್ಲಿ ಸ್ಥಿರತೆ ನಮಗೆ ಬಹಳ ಮುಖ್ಯವಾಗುತ್ತದೆ. ಈ ಒಪ್ಪಂದ ಆ ದಿಕ್ಕಿನಲ್ಲಿ ಯಾವುದೇ ಸಹಾಯ ನೀಡುವುದಿಲ್ಲ ಮಾತ್ರವಲ್ಲ, ಈ ಪ್ರದೇಶವನ್ನು ಅಸ್ಥಿರಗೊಳಿಸುತ್ತಿರುವ ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಆಳರಸರೊಂದಿಗೆ ನಮ್ಮನ್ನು ಗುರುತಿಸುವಂತೆ ಮಾಡುತ್ತದೆ. ಹೈಡ್ ಆಕ್ಟ್ ಬಯಸುವಂತೆ ನಾವು ಅಮೆರಿಕಾದ ಕಿರಿಯ ಪಾಲುದಾರರಾಗುವುದು ವಾಸ್ತವವಾಗಿ ನಮ್ಮ ಇಂಧನ ಭದ್ರತೆಗೆ ಮಾರಕವಾಗಬಹುದು. ಇರಾನ್– ಪಾಕಿಸ್ತಾನ–ಭಾರತ ಅನಿಲ ಕೊಳವೆ ಮಾರ್ಗ ಯೋಜನೆಗೆ ಅಮೆರಿಕಾದ ವಿರೋಧ, ಅದರಿಂದಾಗಿ ಈ ಯೋಜನೆಯನ್ನು ಕೈಬಿಡುವ ಒತ್ತಡಕ್ಕೆ ಭಾರತ ಒಳಗಾಗಿರುವುದು ಇದಕ್ಕೊಂದು ಉದಾಹರಣೆ. ಏಪ್ರಿಲ್ 2008ರಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ಇರಾನಿ ಅಧ್ಯಕ್ಷರು ಈ ಬಗ್ಗೆ ಇರುವ ಭಿನ್ನಾಭಿಪ್ರಾಯವನ್ನು 45 ದಿನಗಳೊಳಗೆ ಪರಿಹರಿಸಿಕೊಳ್ಳಬೇಕು ಎಂದು ಹೇಳಿದ್ದರು. ಆದರೆ ಈ ಅವಧಿಯಲ್ಲಿ ಭಾರತ ಸರ್ಕಾರ ಈ ನಿಟ್ಟಿನಲ್ಲಿ ಏನೂ ಮಾಡಲಿಲ್ಲ. ಏಕಿರಬಹುದು? ಭಾರತಕ್ಕೆ ಈ ಅನಿಲ ಪೂರೈಕೆಯ ಆವಶ್ಯಕತೆ ಇಲ್ಲವೇ?

ಪರಮಾಣು ಶಕ್ತಿ ಭವಿಷ್ಯದ ಶಕ್ತಿ ಎಂದು ಈ ಒಪ್ಪಂದವನ್ನು ಸಮರ್ಥಿಸುವವರು ವಾದಿಸುತ್ತಾರೆ. ಆದರೆ ಇದು ವಾಸ್ತವತೆಯನ್ನು ಗಮನಕ್ಕೆ ತಗೊಂಡಿಲ್ಲ. ಹೆಚ್ಚಿನ ಮುಂದುವರೆದ ದೇಶಗಳು ಈಗ ಈ ಪರಮಾಣು ಶಕ್ತಿಯನ್ನು ಆಯ್ದುಕೊಳ್ಳುತ್ತಿಲ್ಲ, ಅಮೆರಿಕಾದಲ್ಲೇ 1996ರ ನಂತರ ಯಾವುದೇ ಪರಮಾಣು ರಿಯಾಕ್ಟರ್ ಆರಂಭವಾಗಿಲ್ಲ. ಕಳೆದ 27 ವರ್ಷಗಳಿಂದ ಯಾವುದೇ ಹೊಸ ರಿಯಾಕ್ಟರುಗಳಿಗೆ ಅಲ್ಲಿ ಲೈಸೆನ್ಸ್ ಕೊಟ್ಟಿಲ್ಲ. ಆದ್ದರಿಂದ ಅಲ್ಲಿನ ಪರಮಾಣು ಉದ್ದಿಮೆ ಹೊಸ ಆರ್ಡರುಗಳಿಲ್ಲದೆ ತೊಳಲಾಡುತ್ತಿದೆ. ಆದರೆ ಈ ಒಪ್ಪಂದ ಅವರಲ್ಲಿ ಹೊಸ ಆಸೆ ಮೂಡಿಸಿದೆ. ಕೋಟ್ಯಾಂತರ ಡಾಲರುಗಳಷ್ಟು ಮೌಲ್ಯದ ರಿಯಾಕ್ಟರುಗಳನ್ನು

ಭಾರತಕ್ಕೆ ಮಾರುವ ನಿರೀಕ್ಷೆ ಅವುಗಳದ್ದು.

ಆದರೆ ನಮ್ಮ ಸರಕಾರದ ಆದ್ಯತೆಯೇನು? ಇರಾನ್ ಮತ್ತಿತರ ಪಶ್ಚಿಮ ಏಶ್ಯಾದ ಮತ್ತು ಮಧ್ಯ ಏಶ್ಯಾದ ದೇಶಗಳಿಂದ ಭವಿಷ್ಯದಲ್ಲಿ ತೈಲ ಮತ್ತು ಅನಿಲ ಪೂರೈಕೆಗೆ ಪೂರಕವಾದ ಕ್ರಮಗಳನ್ನು ಕೈಗೊಳ್ಳುವುದೋ ಅಥವಾ ಅಮೆರಿಕಾದ ಜನರಲ್ ಇಲೆಕ್ಟ್ರಿಕ್ ಮತ್ತು ವೆಸ್ಟಿಂಗ್‌ಹೌಸ್ ನಂತಹ ಕಂಪನಿಗಳಿಂದ ಬೇರೆ ಯಾರೂ ಖರೀದಿಸದ ಪರಮಾಣು ರಿಯಾಕ್ಟರುಗಳನ್ನು ಖರೀದಿಸಿ ಅವುಗಳನ್ನು ಉಳಿಸುವುದೋ?



**ಈ ಒಪ್ಪಂದದ ಘೋಷಿತ ಉದ್ದೇಶ ಪರಮಾಣು ಶಕ್ತಿಯ ಕ್ಷೇತ್ರದಲ್ಲಿ ಭಾರತದ ಮೇಲೆ ಹೇರಲಾಗಿರುವ ನಿರ್ಬಂಧಗಳನ್ನು ತೆಗೆಯುವುದು. ಈ ದೃಷ್ಟಿಯಿಂದಲಾದರೂ ಇದು ಭಾರತಕ್ಕೆ ಪ್ರಯೋಜನಕಾರಿ ಯಾಗಿದೆಯೋ? ಪ್ರಧಾನಮಂತ್ರಿಗಳು ಸಂಸತ್ತಿನ ರಾಜ್ಯಸಭೆಯಲ್ಲಿ ನೀಡಿದ ಭರವಸೆಗಳನ್ನು ಈಡೇರಿಸುತ್ತದೆಯೇ?**

ಪರಮಾಣು ವ್ಯವಹಾರದ ಮಾತುಕತೆಗಳ ವೇಳೆಯಲ್ಲಿ ಹೊರಬಂದ ಅಂಶಗಳು ಹಾಗೂ ಅಮೆರಿಕಾದ ಸಂಸತ್ತಿನಲ್ಲಿನ ಚರ್ಚೆಗಳ ಸಂದರ್ಭದಲ್ಲಿ ಭಾರತದಲ್ಲಿ ಬಹಳ ಟೀಕೆಗಳು ಬಂದಾಗ ಪ್ರಧಾನಮಂತ್ರಿಗಳು ರಾಜ್ಯಸಭೆಯಲ್ಲಿ ಅಗಸ್ಟ್27, 2006 ರಂದು ಒಂದು ಹೇಳಿಕೆ ನೀಡಿ ಭಾರತ ತನ್ನ ವಿದೇಶಾಂಗ ನೀತಿಯನ್ನು ಸ್ವತಂತ್ರವಾಗಿ ರೂಪಿಸುವಲ್ಲಿ ಯಾವುದೇ ಹಸ್ತಕ್ಷೇಪವನ್ನು ಒಪ್ಪುವುದಿಲ್ಲ ಎಂಬ ಭರವಸೆಯೊಂದಿಗೆ ಪರಮಾಣು ವ್ಯವಹಾರದ ಕುರಿತಂತೆಯೂ ಕೆಲವು ಭರವಸೆಗಳನ್ನು ನೀಡಿದರು–ಅವು ಹೀಗಿವೆ.

- ಭಾರತ "ಸಂಪೂರ್ಣ ನಾಗರಿಕ ಸಹಕಾರ"ಕ್ಕಿಂತ ಕಡಿಮೆಯಾದುದೇನನ್ನು ಒಪ್ಪುವುದಿಲ್ಲ. ಪರಿಮಾಣು ಇಂಧನ, ಪರಮಾಣು ರಿಯಾಕ್ಟರುಗಳು, ಬಳಸಿದ ಇಂಧನದ ಮರುಸಂಸ್ಕರಣೆ ಅಂದರೆ ಪರಮಾಣು ಇಂಧನ ಆವೃತ್ತದ (nuclear fuel cycle) ಎಲ್ಲಾ ಅಂಶಗಳಿಗೆ ಸಂಬಂಧಪಟ್ಟಂತೆ ಸಹಕಾರ ಮತ್ತು ತಂತ್ರಜ್ಞಾನ ವರ್ಗಾವಣೆಗಳ ಮೇಲಿರುವ ನಿರ್ಬಂಧಗಳನ್ನು ತೆಗೆಯಬೇಕೆಂದು ಕೇಳುತ್ತೇವೆ. ಪೂರ್ಣ ಪರುಮಾಣು ಸಹಕಾರದ ಪ್ರಯೋಜನಗಳನ್ನು ಪಡೆಯದಂತೆ ತಡೆಯುವ ಯಾವುದನ್ನೂ ನಾವು ಒಪ್ಪುವುದಿಲ್ಲ ಎಂದು ಭರವಸೆ ನೀಡಿದರು.
- ತಂತ್ರಜ್ಞಾನದ 'ಉಭಯ ಬಳಕೆ'ಯ ಅಂದರೆ ನಾಗರಿಕ ಅಗತ್ಯಗಳಿಗೆ, ಮಿಲಿಟರಿ ಅಗತ್ಯಗಳಿಗೆ ಬಳಕೆಯ ಮೇಲೆ ಯಾವುದೇ ಮಿತಿಗಳನ್ನು ಸರಕಾರ ಒಪ್ಪುವುದಿಲ್ಲ ಎಂದು ನಿರ್ದಿಷ್ಟವಾಗಿ ಅವರು ಭರವಸೆ ನೀಡಿದರು. "ಪರಮಾಣು ಶಕ್ತಿಗೆ ಸಂಬಂಧಪಟ್ಟ ತಂತ್ರಜ್ಞಾನ ವರ್ಗಾವಣೆ ಮತ್ತು ಸಹಕಾರದ ಎಲ್ಲಾ ಅಂಶಗಳ ಮೇಲಿನ ನಿರ್ಬಂಧಗಳನ್ನು ತೆಗೆಸಲು ಪ್ರಯತ್ನಿಸುತ್ತೇವೆ" ಎಂದು ಅವರು ಭರವಸೆ ನೀಡಿದರು.
- ಭಾರತದ ಮೇಲಿನ ಎಲ್ಲಾ ನಿರ್ಬಂಧಗಳನ್ನು ತೆಗೆಯದೆ ಭಾರತದ ನಾಗರಿಕ ಪರಮಾಣು ಸೌಲಭ್ಯಗಳನ್ನು ಅಂತರ್‍ರಾಷ್ಟ್ರೀಯ ಪರಮಾಣು ಶಕ್ತಿ ಏಜೆಂಸಿ(IAEA)ಯ ಸುರಕ್ಷತಾ ಕ್ರಮಗಳಿಗೆ ಒಳಪಡಿಸಲು ಬದ್ಧರಾಗುವುದಿಲ್ಲ, ಅಂತಹ ವಚನ ಅವರಿಗೆ ನೀಡುವುದಿಲ್ಲ ಎಂದು ಪ್ರಧಾನಮಂತ್ರಿಗಳು ಹೇಳಿದರು.

- ಭಾರತ ಪ್ರಸರಣ ನಿಷೇಧ ಮತ್ತಿತರ ಅಗತ್ಯಗಳನ್ನು ಪೂರೈಸುತ್ತಿದೆ ಎಂದು ಅಮೆರಿಕಾದ ಅಧ್ಯಕ್ಷರು ಪ್ರತೀ ವರ್ಷ ವರದಿ ನೀಡಬೇಕೆನ್ನುವುದು ಈ ವ್ಯವಹಾರದ ಭಾವನೆಗೆ ವಿರುದ್ಧವಾದದ್ದು, ಅದಕ್ಕೆ ಬದ್ಧರಾಗಬೇಕಿಲ್ಲ ಎಂದು ಹೇಳಿದರೂ ನಾವು ಅದನ್ನು ಒಪ್ಪುವುದಿಲ್ಲ ಎಂದು ನಿರ್ದಿಷ್ಟವಾಗಿ ಪ್ರಧಾನಿಗಳು ಭರವಸೆ ನೀಡಿದರು.
- ಭಾರತ ತನ್ನ ಪರಮಾಣು ಕಾರ್ಯಕ್ರಮದ ವ್ಯೂಹಾತ್ಮಕ ಅಂದರೆ ಸಾಮರಿಕ ಭಾಗದ ಯಾವುದೇ ರೀತಿಯ ತಪಾಸಣೆಗೆ ಒಪ್ಪುವುದಿಲ್ಲ. ಫಾಸ್ಟ್ ಬ್ರೀಡರ್ ರಿಯಾಕ್ಟರ್ ಮತ್ತು ಥೋರಿಯಂ ಆಧಾರಿತ ರಿಯಾಕ್ಟರುಗಳನ್ನು ಎರಡನೇ ಮತ್ತು ಮೂರನೇ ಹಂತವಾಗಿ ಬಳಸುವ ಭಾರತದ ದೀರ್ಘಕಾಲೀನ ಮೂರು ಹಂತಗಳ ಪರಮಾಣು ಕಾರ್ಯಕ್ರಮದಲ್ಲೂ ಯಾವುದೇ ರಾಜಿಗೆ ಅವಕಾಶ ನೀಡುವುದಿಲ್ಲ ಎಂಬ ಭರವಸೆ ನೀಡಿದರು.
- ಮಾರ್ಚ್ 2006 ರ ನಾಗರಿಕ ಮತ್ತು ಮಿಲಿಟರಿ ಬಳಕೆಯನ್ನು ಪ್ರತ್ಯೇಕಿಸುವ ಯೋಜನೆ ಭಾರತಕ್ಕೆ ತನ್ನ ರಿಯಾಕ್ಟರುಗಳ ಸಂಪೂರ್ಣ ಜೀವಾವಧಿಗೆ ಬೇಕಾದಷ್ಟು ಪರಮಾಣು ಇಂಧನವನ್ನು ಶೇಖರಿಸುವ ಮತ್ತು ಇಂಧನ ಪೂರೈಕೆಗೆ ವ್ಯತ್ಯಯವಾದರೆ ಸೂಕ್ತ ಸರಿಪಡಿಕೆ ಕ್ರಮಗಳನ್ನು ಕೈಗೊಳ್ಳುವ ಹಕ್ಕು ನೀಡಿದೆ ಎಂದು ಪ್ರಧಾನಿಗಳ ಹೇಳಿಕೆ ಒತ್ತಿ ಹೇಳಿತು.
- IAEA ಯೊಂದಿಗೆ ಒಪ್ಪುವ ರಕ್ಷಣಾ ಕ್ರಮಗಳನ್ನು ಬಿಟ್ಟು ಬೇರೆ ಯಾವುದೇ ತಪಾಸಣೆಗೆ ಭಾರತದ ಪರಮಾಣು ಸೌಲಭ್ಯಗಳನ್ನು ಒಳಪಡಿಸುವುದಿಲ್ಲ, ಅಮೆರಿಕನ್ ತಪಾಸಕರು (ಇನ್ಸ್‌ಪೆಕ್ಟರುಗಳು) ನಮ್ಮ ಪರಮಾಣು ಸೌಲಭ್ಯಗಳ ಸುತ್ತ ಅಡ್ಡಾಡಲು ಬಿಡುವ ಪ್ರಶ್ನೆಯೇ ಇಲ್ಲ ಎಂಬ ಗ್ಯಾರಂಟಿಯನ್ನು ಪ್ರಧಾನಿಗಳು ನೀಡಿದ್ದರು.
- ಈ ನಾಗರಿಕ ಪರಮಾಣು ಸಹಕಾರಕ್ಕೆ ಸಂಬಂದಪಟ್ಟಂತೆ ಪರೀಕ್ಷಣೆಯ ವಿಷಯದಲ್ಲಿ ಯಾವುದೇ ಭರವಸೆ ನೀಡುವುದಿಲ್ಲ. ಆದರೆ ಪರಮಾಣು ಪರೀಕ್ಷಣೆಯನ್ನು ನಿಲ್ಲಿಸುವುದಾಗಿ ತಾನೇ ಏಕಪಕ್ಷೀಯವಾಗಿ ಸಾರಿರುವುದನ್ನು ಮುಂದುವರೆಸುತ್ತದೆ.
- ರಾಜೀವ್‌ಗಾಂಧಿ ಕಾರ್ಯಯೋಜನೆಯಂತೆ ಭಾರತ ಜಾಗತಿಕ ಪರಮಾಣು ನಿಶ್ಯಸ್ತ್ರೀಕರಣಕ್ಕೆ ಬದ್ಧವಾಗಿದೆ. ಅದೇ ವೇಳೆಗೆ ಪ್ರಸರಣ ನಿಷೇಧ ಸಂಧಿ(ಎನ್‌ಪಿಟಿ)ಯಂತಹ ಪಕ್ಷಪಾತಪೂರ್ಣ ಪ್ರಸ್ತಾಪಗಳನ್ನು ಅಥವಾ ಪ್ರಾದೇಶಿಕ ನಿಶ್ಯಸ್ತ್ರೀಕರಣದ ಪ್ರಸ್ತಾಪಗಳನ್ನು ಒಪ್ಪಲು ಇನ್ನು ಮುಂದೆಯೂ ನಿರಾಕರಿಸುತ್ತದೆ.

### ❖ ಹೈಡ್ ಆಕ್ಟ್ ಅಂಗೀಕಾರವಾದಾಗ ಈ ಎಲ್ಲಾ ಭರವಸೆಗಳು ಈಡೇರಿವೆಯೇ?

ಹೈಡ್ ಆಕ್ಟ್‌ನ ಅಂತಿಮ ರೂಪ ಇವುಗಳಲ್ಲಿ ಹೆಚ್ಚಿನ ಭರವಸೆಗಳಿಗೆ, ಗ್ಯಾರಂಟಿಗಳಿಗೆ ತದ್ವಿರುದ್ಧವಾಗಿದೆ.

- 'ಪೂರ್ಣ ನಾಗರಿಕ ಪರಮಾಣು ಸಹಕಾರ'ದ ಪ್ರಶ್ನೆಯೇ ಇಲ್ಲ ಎಂಬುದು ಹೈಡ್ ಆಕ್ಟ್‌ನಿಂದ ಸ್ಪಷ್ಟವಾಗುತ್ತದೆ. ಈ ಬಗ್ಗೆ ಸಂಕೇತವೂ ಮೊದಲೇ ಸಿಕ್ಕಿತು. 'ಜಾಗತಿಕ ಪರಮಾಣು ಶಕ್ತಿ ಪಾಲುದಾರಿಕೆ' ಎಂದು ಅಮೆರಿಕಾವು ರಶ್ಯಾ, ಫ್ರಾನ್ಸ್ ಜಪಾನ್

ಮತ್ತು ಚೀಣಾದೊಡನೆ ಆರಂಭಿಸಿರುವ ಮಾತುಕತೆಗಳಲ್ಲಿ ವಿಶ್ವದ ದೇಶಗಳನ್ನು 'ಇಂಧನ ಪೂರೈಸುವವರು' ಮತ್ತು 'ಇಂಧನ ಬಳಸುವವರು' ಎಂದು ವಿಭಜಿಸಲಾಗಿದೆ. ಇಂಧನ ಮರುಸಂಸ್ಕರಣೆ, ಎನ್‌ರಿಚ್‌ಮೆಂಟ್ ಮತ್ತು ಭಾರಜಲ ಸೌಲಭ್ಯಗಳಿಗೆ ಮೊದಲನೇ ವಿಧದಲ್ಲಿ ಬರುವ ದೇಶಗಳಿಗೆ ಮಾತ್ರ ಅವಕಾಶವಿದೆ. ಬುಶ್‌ರವರು ಭಾರತವನ್ನು ಎರಡನೇ ವಿಧದಲ್ಲಿ ಇಟ್ಟಿದ್ದಾರೆ.

- ಭಾರತಕ್ಕೆ ಎನ್‌ರಿಚ್‌ಮೆಂಟ್ ಮತ್ತು ಮರುಸಂಸ್ಕರಣೆ ತಂತ್ರಜ್ಞಾನಗಳನ್ನು ಪಡೆಯಲು ಕಟ್ಟುಪಾಡು ಹಾಕುವ ಅಗತ್ಯವಿದೆ ಎಂದು ಹೈಡ್ ಆಕ್ಟ್ ನಿರ್ದಿಷ್ಟವಾಗಿ ಹೇಳಿದೆ. ಹೀಗೆ ಉಭಯ ಬಳಕೆಯ ತಂತ್ರಜ್ಞಾನಗಳ ವರ್ಗಾವಣೆಯ ಮೇಲಿನ ನಿರ್ಬಂಧಗಳು ಮುಂದುವರೆಯುತ್ತವೆ.
- ಪ್ರತಿವರ್ಷ ಅಮೆರಿಕಾ ಅಧ್ಯಕ್ಷರು ವರದಿ ನೀಡಬೇಕೆನ್ನುವುದನ್ನು ಒಪ್ಪುವುದಿಲ್ಲ ಎಂದು ಪ್ರಧಾನಮಂತ್ರಿಗಳೇನೋ ಖಡಾಖಂಡಿತವಾಗಿ ಹೇಳಿದರು. ಆದರೆ ಹೈಡ್ ಆಕ್ಟ್‌ನಲ್ಲಿ ಇದನ್ನು ತೆಗೆಯಲಿಲ್ಲ. ವಾರ್ಷಿಕ 'ಪ್ರಮಾಣ ಪತ್ರ' (certification) ಎನ್ನುವ ಬದಲು ವಾರ್ಷಿಕ 'ಪರಾಮರ್ಶೆ' (assessment) ಎಂದಷ್ಟೇ ಬದಲಾಯಿತು.
- ಪರಮಾಣು ಕಾರ್ಯಕ್ರಮದ ನಾಗರಿಕೇತರ ಭಾಗದ ತಪಾಸಣೆಯ ಬಗ್ಗೆಯೂ ಪ್ರಧಾನಿಗಳ ಭರವಸೆ ಈಡೇರಲಿಲ್ಲ. ಭಾರತದ ವ್ಯೂಹಾತ್ಮಕ ಪರಮಾಣು ಕಾರ್ಯಕ್ರಮದಲ್ಲಿ ಅದು ಕೈಗೊಳ್ಳುವ ವಿವಿಧ ಕ್ರಿಯೆಗಳ ಬಗ್ಗೆಯೂ ಅಮೆರಿಕಾದ ಅಧ್ಯಕ್ಷರು ವರದಿ ನೀಡಬೇಕು ಎಂದು ಹೈಡ್ ಆಕ್ಟ್ ವಿಧಿಸಿದೆ.]
- ಇಂಧನ ಪೂರೈಕೆಗೆ ಅಡ್ಡಿಯಾದಾಗ ಅದು ಅಮೆರಿಕಾ ಈ ಒಪ್ಪಂದವನ್ನು ಅಂತ್ಯಗೊಳಿಸಿದ್ದರಿಂದ ಆಗಿದ್ದರೆ ಪರಮಾಣು ಪೂರೈಕೆದಾರರ ಗುಂಪಿನ ಇತರರೂ ಹಾಗೆ ಮಾಡುವಂತೆ ಅದು ಖಂಡಿತಾ ಪ್ರಯತ್ನಿಸುತ್ತದೆ ಎಂದಿದೆ ಹೈಡ್ ಆಕ್ಟ್. ಇಂಧನ ಶೇಖರಣೆಯನ್ನು ಕೆಲಸಗಳಿಗೆ ಅಗತ್ಯವಿದ್ದಷ್ಟು ಮಾತ್ರ ಅದಕ್ಕಿಂತ ಹೆಚ್ಚು ಶೇಖರಣೆಗೆ ನೆರವು ಇಲ್ಲ ಎಂದೂ ಈ ಹೈಡ್ ಆಕ್ಟ್ ಹೇಳುತ್ತದೆ.
- ಭಾರತ ಪರಮಾಣು ಪರೀಕ್ಷಣೆ ಮಾಡಿದರೆ ಈ ಒಪ್ಪಂದ ಕೊನೆಗೊಳ್ಳುತ್ತದೆ ಎಂದೂ ಸ್ಪಷ್ಟವಾಗಿದೆ. ಅಷ್ಟೇ ಅಲ್ಲ, ಅಮೆರಿಕಾದ ಬೇರೆ ಯಾವುದೇ ಕಾನೂನಿನಿಂದಾಗಿಯೂ ಈ ಒಪ್ಪಂದವನ್ನು ಅಂತ್ಯಗೊಳಿಸಬಹುದು. ಆಗ ಇತರ ದೇಶಗಳೂ ಸಹಕರಿಸದಂತೆ ಮಾಡಿ ಮತ್ತೆ ಭಾರತವನ್ನು ಪರಮಾಣು ಶಕ್ತಿ ರಂಗದಲ್ಲಿ ಒಂಟಿಯಾಗಿಸಬಹುದು.
- ಪ್ರಸರಣ ನಿಷೇಧ ಸಂಧಿಗೆ (ಎನ್‌ಪಿಟಿ) ಸಹಿಹಾಕದಿದ್ದರೂ ಪ್ರಸರಣ ಭದ್ರತಾ ಮುತುವರ್ಜಿ (Proliferation Secrurity Initiative) ಮೂಲಕ ಪ್ರಸರಣ ನಿಷೇಧ ವ್ಯವಸ್ಥೆಯಲ್ಲಿ, ಇತರ ಶಸ್ತ್ರಾಸ್ತ್ರ ಹತೋಟಿ ವ್ಯವಸ್ಥೆಯಲ್ಲಿ ಪಾಲುಗೊಳ್ಳಬೇಕಾಗುತ್ತದೆ. ಹಿಂದಿನ ಎನ್‌ಡಿಎ ಸರಕಾರ ಭಾರತವನ್ನು ಯಾವುದೇ ರೀತಿಯಲ್ಲಿ ಪರಮಾಣು ಶಸ್ತ್ರಾಸ್ತ್ರಗಳ ಪ್ರಭುತ್ವ (nuclear state) ಎಂದು ಪ್ರವೇಶಿಸುವುದು ಸಾಧ್ಯವಾಗುವುದಾದರೆ ಎನ್‌ಪಿಟಿ ಗೆ ಸಹಿ ಹಾಕಲು ಭಾರತ ಸಿದ್ಧ ಎಂಬ ಸಂಕೇತ ನೀಡಿತ್ತು. ಯುಪಿಎ ಸರಕಾರ ಈ ನೀತಿಯನ್ನು ನೇರವಾಗಿ ಬಿಟ್ಟಿಲ್ಲ. ಈ ವಿಷಯದಲ್ಲಿ ಬಂದಿರುವ ಏಕೈಕ ಸ್ಪಷ್ಟೀಕರಣವೆಂದರೆ ಎನ್‌ಪಿಟಿ ಅಥವಾ ಸಿಟಿಬಿಟಿಯ ಯಾವುದೇ ದ್ವಿಪಕ್ಷೀಯ ರೂಪದಲ್ಲಿ

ಭಾರತ ಭಾಗವಹಿಸುವುದಿಲ್ಲ ಎಂದು ನಮ್ಮ ಪ್ರಧಾನಿಗಳು ಅಧ್ಯಕ್ಷ ಬುಶ್‌ರವರಿಗೆ ವೈಯಕ್ತಿಕವಾಗಿ ತಿಳಿಸಿದ್ದಾರೆ ಎಂಬುದು.

❖ **123 ಒಪ್ಪಂದದ ನಂತರವಾದರೂ ಈ ಭರವಸೆಗಳು ಈಡೇರಿವೆಯೇ? ಅಗಸ್ಟ್ 13, 2007 ಲೋಕಸಭೆಯಲ್ಲಿ ಪ್ರಧಾನಮಂತ್ರಿಗಳ ಹೇಳಿಕೆ ಈ ಒಪ್ಪಂದದ ಸ್ವರೂಪದ ಬಗ್ಗೆ ಹೊಸ ಬೆಳಕನ್ನೇನಾದರೂ ಚೆಲ್ಲಿದೆಯೇ?**

123 ಒಪ್ಪಂದ ಆಯಾಯ ದೇಶದ ರಾಷ್ಟ್ರೀಯ ಕಾನೂನಿನ ಪ್ರಕಾರ ಅನುಸ್ಠಾನಕ್ಕೆ ಬರುತ್ತದೆ ಎಂದು ಸ್ಪಷ್ಟವಾಗಿ ಹೇಳಲಾಗಿದೆ. ಈ ಕುರಿತ ಅಮೆರಿಕಾದ ರಾಷ್ಟ್ರೀಯ ಕಾನೂನು ಅಣುಶಕ್ತಿ ಕಾನೂನು ಮತ್ತು ಹೈಡ್ ಆಕ್ಟ್. ಅದ್ದರಿಂದ ಹೈಡ್ ಆಕ್ಟ್‌ನಲ್ಲಿರುವ ಮಿತಿಗಳೆಲ್ಲವೂ ಮುಂದುವರೆಯುತ್ತವೆ.

- ಈ ಒಪ್ಪಂದ ಇಂಧನ ಆವೃತ್ತದ ಅಂಶಗಳನ್ನು ಒಳಗೊಂಡ 'ಪೂರ್ಣ ನಾಗರಿಕ ಪರಮಾಣು ಸಹಕಾರ' ದ ಬಗ್ಗೆ ಮಾತನಾಡುತ್ತದೆಯೇ ಹೊರತು ಪರಮಾಣು ಇಂಧನ ಅವೃತ್ತದ ಎಲ್ಲಾ ಅಂಶಗಳ ಬಗ್ಗೆ ಅಲ್ಲ. ಇಂಧನ ಮರುಸಂಸ್ಕರಣ, ಎನ್‌ರಿಚ್‌ಮೆಂಟ್, ಭಾರಜಲ ಸೌಲಭ್ಯಗಳನ್ನು ಈ ಒಪ್ಪಂದ ಒಳಗೊಂಡಿರುವುದಿಲ್ಲ. ಎರಡನೆಯದಾಗಿ ಉಭಯ ಬಳಕೆ ತಂತ್ರಜ್ಞಾನಕ್ಕೆ ಸಂಬಂಧಪಟ್ಟ ನಿರ್ಬಂಧವೂ ಮುಂದುವರೆಯುತ್ತದೆ. ಒಟ್ಟಿನಲ್ಲಿ ಭಾರತದ ಮೇಲೆ ಹೇರಿರುವ ಪರಮಾಣು ನಿರ್ಬಂಧದ ಅತ್ಯಂತ ಭಾರವಾದ ಹೊರೆ ಅಷ್ಟೇನೂ ಹಗುರವಾಗಿಲ್ಲ.
- ಇಂಧನ ಮರುಸಂಸ್ಕರಣೆ ಮತ್ತು ಎನ್‌ರಿಚ್‌ಮೆಂಟ್‌ನಲ್ಲಿ ಉಭಯ ಬಳಕೆಯ ಕಟ್ಟುಪಾಡುಗಳನ್ನು ಹಾಕುವುದು ಮತ್ತು ಸಹಾಯ ನೀಡದೇ ಇರುವುದು ನಮ್ಮ ಮೂರು ಹಂತಗಳ ಪರಮಾಣು ಕಾರ್ಯಕ್ರಮಕ್ಕೆ ಅಡ್ಡಿಯುಂಟು ಮಾಡಬಹುದು. 123 ಒಪ್ಪಂದ ಭಾರತದ ಮೂರು ಹಂತದ ಪರಮಾಣು ಕಾರ್ಯಕ್ರಮವನ್ನು ತಟ್ಟುತ್ತದೆಯೇ ಎಂದು ಕೇಳಿದಾಗ ಹಿಂದೆ ಅಣುಶಕ್ತಿ ಆಯೋಗದ ಅಧ್ಯಕ್ಷರಾಗಿದ್ದ ಈಗ ಪ್ರಧಾನಮಂತ್ರಿಗಳ ಮುಖ್ಯ ವಿಜ್ಞಾನ ಸಲಹೆಗಾರರಾಗಿರುವ ಡಾ.ಎಂ.ಆರ್ ಶ್ರೀನಿವಾಸನ್ ಕೂಡಾ "ಅದು ಭಾರತದ ಮೂರು ಹಂತಗಳ ಕಾರ್ಯಕ್ರಮವನ್ನು ಮಂದಗೊಳಿಸುವುದಿಲ್ಲ" ಎಂದಷ್ಟೇ ಹೇಳಿದರು. ಅಂದರೆ ಭಾರತದ ಪರಮಾಣು ವಿಜ್ಞಾನಿಗಳು ಇದುವರೆಗೆ ಯಾವ ನಿರ್ಬಂಧದೊಳಗೆ ಕೆಲಸ ಮಾಡುತ್ತಿದ್ದಾರೆಯೋ ಆ ಪರಿಸ್ಥಿತಿ ಮುಂದುವರೆಯುತ್ತದೆ
- ಇಂಧನ ಪೂರೈಕೆಯ ಭರವಸೆಯೂ ಅಸ್ಪಷ್ಟವಾಗಿಯೇ ಉಳಿದಿದೆ. ಪರಮಾಣು ಸಹಕಾರವು ನಿಂತು ಹೋದರೆ ಇಂಧನ ಪೂರೈಕೆಯ ಸ್ವಲ್ಪ ಭರವಸೆಯಿದೆ ಎಂಬ ಸರಕಾರದ ಮಾತೂ ವಾಸ್ತವ ಸಂಗತಿಗಳನ್ನು ಕಂಡರೆ ಸರಿಯೆನಿಸುವುದಿಲ್ಲ.

ಈ ಸಹಕಾರವನ್ನು ನಿಲ್ಲಿಸುವ ಮೊದಲು ವಿವರವಾದ ಸಮಾಲೋಚನೆಗಳನ್ನು ನಡೆಸಲು ಈ ಒಪ್ಪಂದದಲ್ಲಿ ಅವಕಾಶವಿದೆ ಎಂದು ಪ್ರಧಾನ ಮಂತ್ರಿಗಳು ಹೇಳಿದ್ದಾರೆ. ಆದರೆ ಇದು ಕಡ್ಡಾಯವಲ್ಲ ಎಂಬ ಅಂಶವನ್ನು ಗಮನಿಸಬೇಕು. 123 ಒಪ್ಪಂದ ಕಲಮು 14.2 ರ ಪ್ರಕಾರ ಭಾರತಕ್ಕೆ ಅಥವಾ ಅಮೆರಿಕಾಕ್ಕೆ ಸಮಾಲೋಚನೆಗಳಿಂದೇನೂ

ಉಪಯೋಗವಿಲ್ಲ ಎಂದೆನಿಸಿದರೆ ಸಮಾಲೋಚನೆ ನಡೆಸದೆಯೇ ಒಪ್ಪಂದವನ್ನು ಕೊನೆಗೊಳಿಸಬಹುದು

- 123 ಒಪ್ಪಂದ ಪರಮಾಣು ಅಸ್ತ್ರವನ್ನು ಪರೀಕ್ಷಿಸುವ ಭಾರತ ಹಕ್ಕನ್ನು ಮೊಟಕುಗೊಳಿಸುವುದಿಲ್ಲ ಎಂದು ಪ್ರಧಾನಮಂತ್ರಿಗಳು ಹೇಳಿದರು. ಅದು ನಿಜ. ಆದರೆ ಭಾರತ ಪರಮಾಣು ಪರೀಕ್ಷಣೆ ನಡೆಸಿದರೆ ಆಗುವ ಪರಿಣಾಮದ ಬಗ್ಗೆ ಹೈಡ್ ಆಕ್ಟ್ ನಲ್ಲಿ ಹೇಳಲಾಗಿದೆ. "ಭಾರತ ಪರಮಾಣು ಪರೀಕ್ಷಣೆ ನಡೆಸಿದರೆ ಎಲ್ಲಾ ಪರಮಾಣು ಸಹಕಾರ ಕೊನೆಗೊಳ್ಳುತ್ತದೆ ಎಂಬ ಅಂಶವನ್ನು 123 ಒಪ್ಪಂದ ಒಳಗೊಂಡಿದೆ" ಎಂದು ಮರುದಿನ ಅಂದರೆ ಅಗಸ್ಟ್14, 2007 ರಂದು ಅಮೆರಿಕನ್ ವಿದೇಶಾಂಗ ಇಲಾಖೆ ವಕ್ತಾರ ಸಿಯನ್ ಮೆಕೊರ್ಮಕ್ ಸ್ಪಷ್ಟಪಡಿಸಿರು. ಆಗ "ಎಲ್ಲಾ ವಸ್ತುಗಳನ್ನು, ಈ ಒಪ್ಪಂದದ ಪ್ರಕಾರ ಮರುಸಂಸ್ಕರಿಸಿದ ವಸ್ತುಗಳನ್ನು ಕೂಡಾ ಹಿಂದಿರುಗಿಸಬೇಕು ಎಂಬ ಅಂಶ ಇದೆ" ಎಂದೂ ಅವರು ಹೇಳಿದರು.

ಐಎಇಎ ಯೊಂದಿಗೆ ಮಾಡಿಕೊಂಡ ಸುರಕ್ಷಣಾ ಒಪ್ಪಂದದ ಕರಡಿನಲ್ಲೂ ಇವನ್ನೆಲ್ಲಾ ಸರಿಪಡಿಸಿಲ್ಲ ಎಂಬುದನ್ನು ನಾವು ಈ ಹಿಂದೆ ನೋಡಿದ್ದೇವೆ.



**ಒಪ್ಪಂದವನ್ನು ವಿರೋಧಿಸುವವರು ದೇಶದ ಅಭಿವೃದ್ಧಿಯ ವಿರೋಧಿಗಳು ಎಂದು ಟೀಕಿಸಲಾಗಿದೆ. ಭಾರತದ ದೊಡ್ಡ ಉದ್ಯಮಿಗಳು ಈ ಒಪ್ಪಂದವನ್ನು ಕಾರ್ಯಗತಗೊಳಿಸಬೇಕು ಎಂದು ಆಗಾಗ ಹೇಳಿಕೆ ನೀಡುತ್ತಿದ್ದಾರೆ. ಭಾರತದ ಉದ್ದಿಮೆಗಳ ಮೇಲೂ ಇದರ ಪ್ರಭಾವ ಯಾವ ರೀತಿಯದ್ದು?**

ಈ ಮೊದಲು ಹೇಳಿದಂತೆ ಇದೊಂದು ನಮ್ಮ ದೇಶದ ಜನಜೀವನವನ್ನು ಹಲವು ರೀತಿಗಳಲ್ಲಿ ತಟ್ಟುವ ಒಪ್ಪಂದ. ಸಹಜವಾಗಿಯೇ ನಮ್ಮ ಆರ್ಥಿಕ ರಂಗದ ಮೇಲೂ ಇದು ಗಂಭೀರ ಪ್ರಭಾವ ಬೀರುವಂತದ್ದು. ಈ ಹಿಂದೆ ಹೇಳಿದಂತೆ ಅಮೆರಿಕಾದೊಡನೆ ಸಾಮರಿಕ ಸಂಬಂಧ ಭಾರತದ ಜನಸಾಮಾನ್ಯರ ಅಗತ್ಯವೇನಲ್ಲ. ಅದೇ ರೀತಿ ಭಾರತದ ದೊಡ್ಡ ಉದ್ದಿಮೆದಾರರಿಗೆ ಈ ಒಪ್ಪಂದವಾದರೆ ಬಹಳಷ್ಟು ಪ್ರಯೋಜನಗಳು ಅವರಿಗೆ ದಕ್ಕಬಹುದು. ಆದರೆ ಜನಸಾಮಾನ್ಯರಿಗೆ, ಕಾಂಗ್ರೆಸ್‌ನ ಚುನಾವಣಾ ಪ್ರಣಾಳಿಕೆ ಹೇಳಿರುವ 'ಆಮ್ ಆದ್ಮಿ"(ಜನಸಾಮಾನ್ಯರು)ಗೆ ಏನು ಪ್ರಯೋಜನ ಎಂಬುದೇ ನಮಗೆ ಮುಖ್ಯವಾಗಬೇಕಲ್ಲವೇ?

ಮನಮೋಹನ್‌ಸಿಂಗ್‌ರವರ ಜುಲೈ 2005 ರ ಅಮೆರಿಕಾ ಭೇಟಿಯ ಸಮಯದಲ್ಲಿ 'ಅಮೆರಿಕಾ–ಭಾರತ ಸಿಇಒ ವೇದಿಕೆ' ಆರಂಭವಾಯಿತು. ಸಿಇಒಗಳೆಂದರೆ 'ಮುಖ್ಯ ಕಾರ್ಯಕಾರಿ ಅಧಿಕಾರಿ'ಗಳು, ಅಂದರೆ ದೊಡ್ಡ ಕಂಪನಿಗಳ ಆಡಳಿತ ಮುಖ್ಯಸ್ಥರು. ಇದರರ್ಥ ಇದು ಎರಡೂ ದೇಶಗಳ ದೊಡ್ಡ ಕಂಪನಿಗಳ ಹಿತಾಸಕ್ತಿಗಳ ಈಡೇರಿಕೆಗಾಗಿ ರಚಿಸಿದ ವೇದಿಕೆ. ಭಾರತದ ರತನ್ ಟಾಟಾ ಮತ್ತು ಜೆಪಿ ಮಾರ್ಗನ್‌ಚೇಸ್ ಎಂಬ ದೊಡ್ಡ ಹಣಕಾಸು ಸಂಸ್ಥೆಯ ವಿಲಿಯಂ ಹ್ಯಾರಿಸನ್ ಇದರ ಜಂಟಿ ಅಧ್ಯಕ್ಷರು. 'ಉದ್ದಿಮೆ ಮಟ್ಟದಲ್ಲಿ ಎರಡೂ ದೇಶಗಳ ನಡುವೆ ಹೆಚ್ಚಿನ ಪಾಲುದಾರಿಕೆ ಮತ್ತು ಸಹಕಾರಕ್ಕೆ ಒಂದು ಮಾರ್ಗ ನಕಾಶೆ ತಯಾರಿಸಲು' ಇದನ್ನು ರಚಿಸಲಾಯಿತು.

ಇಂತಹ ಒಂದು ಮಾರ್ಗನಕಾಶೆ 'ಅಮೆರಿಕಾ-ಭಾರತ ವ್ಯೂಹಾತ್ಮಕ ಆರ್ಥಿಕ ಪಾಲುದಾರಿಕೆ' ಮಾರ್ಚ್ 2006 ರಲ್ಲಿ ಬುಶ್‌ರವರ ಭಾರತ ಭೇಟಿ ಸಂದರ್ಭದಲ್ಲಿ ಬಿಡುಗಡೆಗೊಂಡಿತು. ಆ ಸಂದರ್ಭದಲ್ಲಿ ಬುಶ್-ಮನಮೋಹನ್‌ಸಿಂಗ್ ಜಂಟಿ ಹೇಳಿಕೆ ಇದನ್ನು ಸ್ವಾಗತಿಸಿ ಇದರ ಶಿಫಾರಸುಗಳನ್ನು ಪರಿಶೀಲಿಸುವುದಾಗಿ ಒಪ್ಪಿತು.

ಏನು ಆ ಶಿಫಾರಸುಗಳ ಸಾರಾಂಶ? ಅಮೆರಿಕಾ ಭಾರತ ಮುಕ್ತ ವ್ಯಾಪಾರ ಒಪ್ಪಂದವೊಂದಕ್ಕೆ ಸಂವಾದ ಆರಂಭಿಸುವುದು. ಇಂತಹ 'ಮುಕ್ತವ್ಯಾಪಾರ ಒಪ್ಪಂದ'ಗಳು ಜಗತ್ತಿನ ಇತರೆಡೆಗಳೂ ನಡೆದಿವೆ. ಅವುಗಳ ಪ್ರಯೋಜನ ಆಗಿರುವುದು ಬಲಿಷ್ಠ ದೇಶಗಳಿಗೇ ಎಂಬುದು ಸಾಮಾನ್ಯ ಅನುಭವ. ಅಷ್ಟೇ ಅಲ್ಲ, ಈ ಆಡಳಿತ ಮುಖ್ಯಸ್ಥರ ವೇದಿಕೆಯ 30 ಶಿಫಾರಸುಗಳನ್ನು ನೋಡಿದರೇ ಸಾಕು, ಇದರಿಂದ ಯಾರಿಗೆ ನಿಜವಾಗಿ ಪ್ರಯೋಜನ ಎಂಬುದು ಸ್ಪಷ್ಟವಾಗುತ್ತದೆ. ಆ 30 ಶಿಫಾರಸುಗಳಲ್ಲಿ 4 ಮಾತ್ರ ಭಾರತಕ್ಕೆ ಸಂಬಂಧಪಟ್ಟದ್ದು. ಇದರಲ್ಲಿ ಈ ಭಾರತ-ಅಮೆರಿಕಾ ಪರಮಾಣು ವ್ಯವಹಾರವೂ ಸೇರಿದೆ. ಅಲ್ಲದೆ ಉಭಯ ಬಳಕೆಯ ತಂತ್ರಜ್ಞಾನದ ವರ್ಗಾವಣೆ ಮತ್ತು ಭಾರತದ ಮಾಹಿತಿ ತಂತ್ರಜ್ಞಾನ ಹಾಗೂ ಆರೋಗ್ಯ ಸೇವೆ(ನರ್ಸಿಂಗ್)ಗಳಲ್ಲಿ ಇರುವವರಿಗೆ ವೀಸಾ ವ್ಯವಸ್ಥೆಯನ್ನು ಉದಾರಗೊಳಸಿರುವ ಅಂಶಗಳು ಇತರ 'ಪ್ರಯೋಜನ'ಗಳು. ಪರಮಾಣು ಒಪ್ಪಂದದ 'ಪ್ರಯೋಜನಗಳು ಏನೆಂದು ಪ್ರತ್ಯೇಕವಾಗಿ ನೋಡಿದ್ದೇವೆ. ಇನ್ನು 'ಉಭಯ ಬಳಕೆ' ತಂತ್ರಜ್ಞಾನದ ವರ್ಗಾವಣೆಗೆ ಹೈಡ್ ಆಕ್ಟ್ ದೊಡ್ಡ ಅಡ್ಡಿಯನ್ನೇ ಉಂಟುಮಾಡಿದೆ. ಮತ್ತು ವೀಸಾ ಉದಾರೀಕರಣದ ಪ್ರಕ್ರಿಯೆ ಬಗ್ಗೆ ಅಮೆರಿಕಾದಲ್ಲಿಯೇ ಬಿಸಿ ಬಿಸಿ ಚರ್ಚೆ ನಡೆಯುತ್ತಿದೆ. ಭಾರತದಿಂದ ನುರಿತ ವೃತ್ತಿಪರರು, ಕೆಲಸಗಾರರು ವಲಸೆ ಬರುತ್ತಿರುವುದರಿಂದ ಅಮೆರಿಕಾದ ಕೆಲಸಗಾರರಿಗೆ ತೊಂದರೆಯಾಗುತ್ತಿದೆ ಎಂದು ಅಲ್ಲಿಯ ನೀತಿ ನಿರೂಪಕರಲ್ಲಿಯೇ ಬಹಳ ಮಂದಿ ಅಭಿಪ್ರಾಯ ಪಡುತ್ತಿದ್ದಾರೆ. ಹೀಗೆ ಈ 4 'ಪ್ರಯೋಜನ'ಗಳು ಕೂಡಾ ಬಹಳಷ್ಟು ಭ್ರಮೆಗಳಾಗಿಯೇ ಉಳಿದಿವೆ.

ಇನ್ನು ಈ 30 ಶಿಫಾರಸುಗಳ ಸ್ವರೂಪವನ್ನು ನೋಡಿ ಇವುಗಳಲ್ಲಿ 21 ಭಾರತ ಸರಕಾರ ಅಮೆರಿಕನ್ ಕಂಪನಿಗಳಿಗೆ ಲಾಭವಾಗುವಂತೆ ಯಾವ-ಯಾವ ರಂಗದಲ್ಲಿ ಏನೇನು ಬದಲಾವಣೆ ತರಬೇಕು ಎಂಬ ಬೇಡಿಕೆಗಳೇ ಆಗಿವೆ.

ಉದಾಹರಣೆ ನೋಡಿ: 1) ಮೂಲರಚನೆಗಳಲ್ಲಿ ಬಂಡವಾಳ ಹೂಡಿಕೆಯ ನಿಯಮಗಳನ್ನು ಉದಾರೀಕರಿಸಬೇಕು,2) ವಿದ್ಯುತ್, ತೈಲ ಮತ್ತು ಅನಿಲ ವಲಯದಲ್ಲಿ ಮಾರುಕಟ್ಟೆ, ಪ್ರೇರಿತ ಸುಧಾರಣೆಗಳು, 3) ದೂರಸಂಪರ್ಕ ವಲಯದಲ್ಲಿ ಇನ್ನಷ್ಟು ಉದಾರೀಕರಣ, ಸಾರ್ವಜನಿಕ ಮತ್ತು ಖಾಸಗೀ ಕಂಪನಿಗಳಿಗೆ 'ಸಮಾನ ಆಟದ ಬಯಲು' ಅಂದರೆ ಸಾರ್ವಜನಿಕ ವಲಯದ ಮೇಲಿನ ಒತ್ತನ್ನು ಖಾಸಗಿಯತ್ತ ತಿರುಗಿಸಬೇಕು, 4) ವಿಮಾ ವಲಯದಲ್ಲಿ ವಿದೇಶೀ ನೇರ ಹೂಡಿಕೆಯ ಮಿತಿಯನ್ನು ಏರಿಸಬೇಕು, ಬ್ಯಾಂಕಿಂಗ್ ವಲಯದಲ್ಲೂ ವಿದೇಶೀ ನೇರ ಹೂಡಿಕೆಯ ನಿಯಮಗಳನ್ನು ಸಡಿಲಿಸಬೇಕು, 6) ಚಿಲ್ಲರೆ ವ್ಯಾಪಾರದಲ್ಲಿ ವಿದೇಶೀ ನೇರಹೂಡಿಕೆಯ ನಿಯಮಗಳನ್ನು ಸಡಿಲಿಸಬೇಕು, 7) ಮುದ್ರಣ ಮಾಧ್ಯಮ, ಪ್ರಸಾರ, ಕೇಬಲ್ ಉಪಗ್ರಹ ವ್ಯವಸ್ಥೆಗಳು ಮತ್ತು ಇಲೆಕ್ಟ್ರಾನಿಕ್ ವ್ಯಾಣಿಜ್ಯ ವಲಯಗಳಲ್ಲಿ ವಿದೇಶಿ ನೇರ ಹೂಡಿಕೆಯ ಮೇಲಿರುವ ಮಿತಿಗಳನ್ನು ತೆಗೆಯಬೇಕು.

8) ರಿಯಲ್ ಎಸ್ಟೇಟ್‌ನಲ್ಲಿ ವಿದೇಶಿ ನೇರ ಹೂಡಿಕೆಯ ಮೇಲಿನ ಮಿತಿಗಳನ್ನು ಸಡಿಲಿಸಬೇಕು, ನಗರ ಭೂಮಿತಿ ರದ್ಧತಿ, ಸ್ಟಾಂಪ್ ಶುಲ್ಕ ಇಳಿಕೆ ಮುಂತಾದ ನಗರ 'ಸುಧಾರಣೆ' ಕ್ರಮಗಳನ್ನು ಕೈಗೊಳ್ಳಬೇಕು, 9) ರಕ್ಷಣಾ ಖರೀದಿ ನಿಯಮಗಳನ್ನು ಸಡಿಲಿಸಬೇಕು 10) ಉನ್ನತ ಶಿಕ್ಷಣದಲ್ಲಿ ವಿದೇಶೀ ನೇರ ಹೂಡಿಕೆಯನ್ನು ಉದಾರೀಕರಿಸಬೇಕು ಇತ್ಯಾದಿ ಇತ್ಯಾದಿ. ಈ ಶಿಫಾರಸುಗಳನ್ನೆಲ್ಲಾ ನೋಡಿದರೆ ಇದು ಭಾರತದ ಆರ್ಥಿಕದ ಅಮೇರಿಕೀಕರಣದ ಪ್ರಣಾಳಿಕೆ ಎಂದೆನಿಸುವುದಿಲ್ಲವೇ? ಇವುಗಳಿಂದ ಭಾರತದ ಜನಸಾಮಾನ್ಯರಿಗೆ ಏನಾದರೂ ಪ್ರಯೋಜನವಿದೆಯೇ? ವಾಸ್ತವವಾಗಿ ಉದಾರೀಕರಣ– ಜಾಗತೀಕರಣ– ಖಾಸಗೀಕರಣದ ನೀತಿಗಳ ಭಾಗವಾದ ಇವುಗಳ ವಿರುದ್ಧ ಭಾರತದ ಜನಸಾಮಾನ್ಯರು ಈಗಾಗಲೇ ತೀವ್ರ, ಹೋರಾಟದಲ್ಲಿದ್ದಾರೆ. ಇವೆಲ್ಲಾ ಯುಪಿಎ ಸರಕಾರ ಅಂಗೀಕರಿಸಿದ 'ರಾಷ್ಟ್ರೀಯ' ಸಾಮಾನ್ಯ ಕನಿಷ್ಟ ಕಾರ್ಯಕ್ರಮ' ದಲ್ಲಿ ಹೇಳಿದ್ದಕ್ಕೆ ವಿರುದ್ಧವಾದ ಅಂಶಗಳು ಎಂಬುದನ್ನು ಗಮನಿಸಬೇಕು.

**ಒಂದು ಉದಾಹರಣೆ ನೋಡಿ:** ವಿಶ್ವ ವ್ಯಾಪಾರ ಸಂಘಟನೆ (ಡಬ್ಲ್ಯು ಟಿ ಓ) ಯ 'ಟ್ರಿಪ್ಸ್' (TRIPS) ಪ್ರಕಾರ ಭಾರತದ ಪೇಟೆಂಟ್ಸ್ ಕಾನೂನಿನಲ್ಲಿ ಬದಲಾವಣೆ ತರಲು 2005ರಲ್ಲಿ ಯುಪಿಎ ಸರಕಾರ ಮೂರನೇ ತಿದ್ದುಪಡಿ ತಂದಿತು. ಎಡಪಕ್ಷಗಳ ಒತ್ತಡದಿಂದಾಗಿ ಇದರಲ್ಲಿ ಜನಸಾಮಾನ್ಯರ ಹಿತಗಳನ್ನು ಕಾಪಾಡಲು ಕೆಲವು ರಕ್ಷಣಾಕ್ರಮಗಳನ್ನು ಒಳಗೊಳ್ಳಲಾಯಿತು. ಸ್ವಿಸ್ ಬಹುರಾಷ್ಟ್ರೀಯ ಕಂಪನಿ ನೊವಾರ್ಟಿಸ್‌ನ ಒಂದು ಲ್ಯೂಕೇಮಿಯಾ–ವಿರೋಧಿ ಔಷಧಿಗೆ ಪೇಟೆಂಟ್ ಕೇಳಿದಾಗ ಇಂತಹ ಒಂದು ಅಂಶದಿಂದಾಗಿ ಅದನ್ನು ತಿರಸ್ಕರಿಸಲಾಯಿತು. ನೋವಾರ್ಟಿಸ್ ಚೆನ್ನೈ ಹೈಕೋರ್ಟ್ ಗೆ ಮೊರೆ ಹೋಯಿತು. ಅದರೆ ಅಲ್ಲಿಯೂ ಅದರ ಅರ್ಜಿಯನ್ನು ವಜಾ ಮಾಡಲಾಯಿತು. ಇದರಿಂದಾಗಿ ಭಾರತದ ಕಂಪನಿಗಳು ಕಡಿಮೆ ಬೆಲೆಯಲ್ಲಿಯೇ ಈ ಔಷಧಿಯನ್ನು ಇನ್ನೂ ಮುಂದೆಯೂ ಕೊಡಲು ಸಾಧ್ಯವಾಗಿದೆ. ಅದಕ್ಕೆ ಪೇಟೆಂಟ್ ಸಿಕ್ಕಿದ್ದರೆ ಇದು ಸಾಧ್ಯವಾಗುತ್ತಿರಲಿಲ್ಲ. ಆದರೆ ಅಮೆರಿಕಾ–ಭಾರತ ಸಿಇಒ ಗಳ ವೇದಿಕೆಯ ಶಿಫಾರಸನ್ನು ಒಪ್ಪಿದರೆ 'ಇನ್ನು ಮುಂದೆ ಇಂತಹ ರಕ್ಷಣೆಗಳು ಸಾಧ್ಯವಾಗುವುದಿಲ್ಲ. ಅದು ಪೇಟೆಂಟ್ ಕುರಿತಂತೆ ಭಾರತ ಮತ್ತು ಅಮೆರಿಕಾದ ಕಾನೂನು ಗಳನ್ನು 'ಸಮನ್ವಯ'ಗೊಳಿಸಬೇಕು ಎಂದಿದೆ. ಭಾರತದ ಪೇಟೆಂಟ್ ಕಾನೂನನ್ನು ಅಮೆರಿಕನ್ ಬಹುರಾಷ್ಟ್ರೀಯ ಕಂಪನಿಗಳ ಗುತ್ತೇದಾರಿ ಹಿತಾಸಕ್ತಿಗಳಿಗೆ ಅನುಕೂಲವಾಗುವಂತೆ ಪುನರ್ರೂಪಿಸಿಬೇಕು ಎಂಬುದೇ ಇದರರ್ಥ ಎಂಬುದು ಅನುಭವಸಿದ್ಧ ಸಂಗತಿ.



## ಭಾರತದ ಕೃಷಿಯ ಮೇಲೂ ಇಂತಹ ಜನ ವಿರೋಧಿ ಪ್ರಭಾವ ಬೀಳುತ್ತದೆಯೇ?

ಹೌದು, ಮನಮೋಹನ್‌ಸಿಂಗ್‌ರವರ ಜುಲೈ 2005 ರ ಅಮೆರಿಕಾ ಭೇಟಿಯ ಸಮಯದಲ್ಲಿ (Agricultural Knowledge Initiative-AKI) ಅಂದರೆ 'ಕೃಷಿ ಜ್ಞಾನ ಮುತುವರ್ಜಿ' ಎಂಬುದನ್ನು ಔಪಚಾರಿಕವಾಗಿ ಆರಂಭಿಸಲಾಯಿತು. ಇದರ ಆಡಳಿತ ಮಂಡಳಿಯಲ್ಲಿ ಭಾರತದ ಕಡೆಯಿಂದ ಸರಕಾರೀ ಅಧಿಕಾರಿಗಳು, ಕೆಲವು ಅಧ್ಯಯನಕಾರರಲ್ಲದೆ, ಐಟಿಸಿಯ ಪ್ರತಿನಿಧಿ ಇದ್ದಾರೆ. ಅಮೆರಿಕಾದ ಕಡೆಯಿಂದ ಮಾನ್ಸಂಟೋ ಮತ್ತು ವಾಲ್‌ಮಾರ್ಟ್‌ನ ಪ್ರತಿನಿಧಿಗಳು ಇದ್ದಾರೆ. ಈ ಗುಂಪು 'ಮಾರುಕಟ್ಟೆ–ಆಧಾರಿತ ಕೃಷಿಯ' ಮೂಲಕ" 'ಸದಾ ಹಸಿರುಕ್ರಾಂತಿ'ಗೆ ಬೆಂಬಲ ನೀಡಲು ಕೆಲಸ ಮಾಡುತ್ತದೆ ಎಂದು

ಹೇಳಲಾಗಿದೆ. ಈ ಸಂಸ್ಥೆಯ ಸ್ವರೂಪ, ಅದರಲ್ಲಿರುವ ಪ್ರತಿನಿಧಿಗಳು ಮತ್ತು ಅದರ ಈ ಉದ್ದೇಶವೇ ಇದು ಭಾರತದ ಸಾಮಾನ್ಯ ರೈತರಿಗಾಗಿ ಅಲ್ಲ ಎಂಬುದನ್ನು ಸೂಚಿಸುವುದಿಲ್ಲವೇ?

ಈ AKI ಪ್ರಕಾರ ಆಹಾರ ಸಂಸ್ಕರಣೆ ಮತ್ತು ಮಾರಾಟ, ಜೀವತಂತ್ರಜ್ಞಾನ, ನೀರು ನಿರ್ವಹಣೆ ಮತ್ತು ವಿಶ್ವವಿದ್ಯಾಲಯ ಸಾಮರ್ಥ್ಯ ನಿರ್ಮಾಣ ಈ ನಾಲ್ಕು ರಂಗಗಳಲ್ಲಿ ಭಾರತ ಮತ್ತು ಅಮೆರಿಕಾ ನಡುವೆ ಸಹಕಾರ ಏರ್ಪಡಬೇಕು. ಕೃಷಿ ಸಂಶೋಧನೆ ಮತ್ತು ಜೀವತಂತ್ರಜ್ಞಾನದ ಕ್ಷೇತ್ರಗಳಲ್ಲಿ ಈಗ ಮಾನ್ಸಾಂಟೋದಂತಹ ಕೃಷಿವ್ಯವಹಾರಗಳ ಕಂಪೆನಿಗಳದ್ದೇ ಕಾರುಬಾರು. ಹೀಗಿರುವಾಗ ಇದರಿಂದ ಭಾರತದ ರೈತನಿಗೆ ಬೇಕಾದ ಜ್ಞಾನ ಸಂಪಾದನೆಗಿಂತ ಅಮೆರಿಕಾದ ಬಹುರಾಷ್ಟ್ರೀಯ ಕಂಪನಿಗಳ ಹತೋಟಿಯನ್ನು ಬಿಗಿಗೊಳಿಸುವ ಜ್ಞಾನ ಮತ್ತು ಪೇಟೆಂಟ್ ವ್ಯವಸ್ಥೆಗೆ ಹೆಚ್ಚು ಒತ್ತು ನೀಡಬಹುದು ಎಂಬ ಸಂದೇಹಕ್ಕೆ ಬಹಳಷ್ಟು ಆಧಾರಗಳಿವೆ. ಭಾರತದ ಬೀಜ ಮಾರುಕಟ್ಟೆಯಲ್ಲಿ ಮಾನ್ಸಂಟೋ ಹೇಗೆ ಭಾರತದ ರೈತರ ಹಿತಾಸಕ್ತಿ ವಿರುದ್ಧ ತನ್ನ ಹಿತಾಸಕ್ತಿ ಬೆಳೆಸಿಕೊಂಡಿದೆ ಎಂಬುದು ಈಗಾಗಲೇ ಕಂಡುಬಂದಿದೆ. ಯುಪಿಎ ಸರಕಾರ ತಂದಿರುವ ಬೀಜ ಮಸೂದೆ ಖಾಸಗಿ ಕಂಪನಿಗಳ ಹಿತವನ್ನು ಪ್ರೋತ್ಸಾಹಿಸುತ್ತದೆ, ರೈತರ ಬೀಜ ಹಕ್ಕುಗಳನ್ನು ಮೊಟಕುಗೊಳಿಸುತ್ತದೆ ಎಂದು ವ್ಯಾಪಕ ಟೀಕೆಗೆ ಒಳಗಾಗಿರುವುದು ಮುಂಬರಲಿರುವ ಅಪಾಯಗಳ ಒಂದು ಮುನ್ಸೂಚನೆ.

ಭಾರತದ ಕೃಷಿ ರಂಗ ತೀವ್ರ ಬಿಕ್ಕಟ್ಟಿನಲ್ಲಿದೆ. ಅದಕ್ಕೆ ಮಾರುಕಟ್ಟೆ ಆಧಾರಿತ ಕೃಷಿ ಪರಿಹಾರ ನೀಡಬಹುದೇ? ಯುಪಿಎ ಸರಕಾರ ರಾಷ್ಟ್ರೀಯ ಸಾಮಾನ್ಯ ಕನಿಷ್ಟ ಕಾರ್ಯಕ್ರಮ (NCMP) ಹೇಳಿರುವ ಮಾದರಿಯೇ ಬೇರೆ. "ಯುಪಿಎ ಸರಕಾರ ಕೃಷಿ ಸಂಶೋಧನೆ ಮತ್ತು ವಿಸ್ತರಣೆ ಗ್ರಾಮೀಣ ಮೂಲ ರಚನೆ ಮತ್ತು ನೀರಾವರಿಯಲ್ಲಿ ಸಾರ್ವಜನಿಕ ಹೂಡಿಕೆಯನ್ನು ಆದಷ್ಟು ಬೇಗನೆ ಹೆಚ್ಚಿಸಬೇಕು........ ಧಾನ್ಯ ಸಂಗ್ರಹಣೆ ಮತ್ತು ಮಾರುಕಟ್ಟೆಯಲ್ಲಿ ನಿರತವಾದ ಸರಕಾರೀ ಸಂಸ್ಥೆಗಳು ಬಡ ಮತ್ತು ಹಿಂದುಳಿದ ರಾಜ್ಯಗಳು ಮತ್ತು ಜಿಲ್ಲೆಗಳ ರೈತರಿಗೆ ವಿಶೇಷ ಗಮನ ನೀಡುವಂತೆ ಯುಪಿಎ ಸರಕಾರ ನೋಡಿಕೊಳ್ಳುತ್ತದೆ. ದೇಶಾದ್ಯಂತ ರೈತರು ನ್ಯಾಯವಾದ ಮತ್ತು ಫಲದಾಯಕ ಬೆಲೆಗಳನ್ನು ಪಡೆಯುತ್ತಾರೆ" ಎಂದು ಅದು ಭರವಸೆ ನೀಡಿದೆ. ಆದರೆ ಈ AKIನ ಕಾರ್ಯಯೋಜನೆಯೇ ಬೇರೆ. ಭಾರತದಲ್ಲಿ ಕೃಷಿವ್ಯಾಪಾರ ಹೂಡಿಕೆಗೆ ಸೌಲಭ್ಯ ಒದಗಿಸುವುದು, ಗುತ್ತಿಗೆ ಕೃಷಿಯಲ್ಲಿ ಅಮೆರಿಕಾದ ಅನುಭವವನ್ನು ಬಳಸುವುದು, ಈಗಿರುವ ಮೂಲರಚನೆಯ ಸರ್ವೆ, ಶೀತಲ ಸರಣಿ ವ್ಯವಸ್ಥೆಯಲ್ಲಿನ ದೌರ್ಬಲ್ಯಗಳನ್ನು ಗುರುತಿಸುವುದು, ಮಾರುಕಟ್ಟೆ ಮಾಹಿತಿ ಸಂಗ್ರಹ, ಸಂಸ್ಕರಣೆ, ವಿಶ್ಲೇಷಣೆ ಮತ್ತು ಹೂಡಿಕೆ ಸಾಮರ್ಥ್ಯವನ್ನು ಕಟ್ಟಿ ಬೆಳೆಸುವುದು ಅದು ಹಾಕಿಕೊಂಡಿರುವ ಯೋಜನೆ. ಇದು ದೇಶೀ ಮತ್ತು ವಿದೇಶೀ ಕೃಷಿ ವ್ಯಾಪಾರ ಪ್ರೇರಿತ ಮಾದರಿ ಎನ್ನುವುದು ಇದರಿಂದ ಸ್ಪಷ್ಟ.

ಭಾರತದ ಕೃಷಿಯನ್ನು ಕುರಿತ ಈ ಎರಡು ಕಣ್ನೋಟಗಳ ನಡುವಿನ ತಿಕ್ಕಾಟ ಇತ್ತೀಚೆಗೆ ನಡೆದ ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ 53ನೇ ಸಭೆಯಲ್ಲಿ ಕಂಡುಬಂತು. ಹನ್ನೆರಡನೇ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿಯ ಸಮಸ್ಯೆಗಳನ್ನು ಚರ್ಚಿಸಲೆಂದೇ ಈ ಸಭೆಯನ್ನು ಏರ್ಪಡಿಸಲಾಗಿತ್ತು. ಅಧಿಕೃತ ನಿರ್ಣಯದಲ್ಲಿ ಒಂದೆಡೆ ಸಾರ್ವಜನಿಕ ಹೂಡಿಕೆಯನ್ನು ಹೆಚ್ಚಿಸಬೇಕು ಮತ್ತು ಆಹಾರ ಧಾನ್ಯಗಳ ಉತ್ಪಾದನೆಯ ಗುರಿ ಹೆಚ್ಚಿಸಬೇಕು

ಎಂದಿತು. ಇನ್ನೊಂದೆಡೆ ಕಂಪನಿಗಳು ಗುತ್ತಿಗೆ ಕೃಷಿಯನ್ನು ನಡೆಸುವಂತೆ ಅನುಕೂಲ ಕಲ್ಪಿಸಲು ರಾಜ್ಯಗಳ ಎಪಿಎಂಸಿ ಕಾನೂನುಗಳನ್ನು 'ಸುಧಾರಿಸ'ಬೇಕೆಂದು ಹೇಳಿತು. ಗುತ್ತಿಗೆ ಕೃಷಿಯನ್ನು ಕುರಿತ ಪ್ರಸ್ತಾಪವನ್ನು ಪಶ್ಚಿಮ ಬಂಗಾಳ, ಕೇರಳ ಮತ್ತು ತ್ರಿಪುರಾದ ಎಡರಂಗ ಸರಕಾರಗಳ ಪ್ರತಿಭಟನೆಯಿಂದಾಗಿ ಮಿತಗೊಳಿಸಲಾಯಿತು.

ಭಾರತ– ಅಮೆರಿಕಾ ಆರ್ಥಿಕ ಸಂಬಂಧಗಳು ಹೇಗೆ ಅಸಮ ಸಂಬಂಧಗಳು ಎಂಬುದು ಡಬ್ಲುಟಿಒ ದ ದೋಹಾ ಸುತ್ತಿನ ಮಾತುಕತೆಗಳಲ್ಲಿ ಸ್ಪಷ್ಟವಾಗಿ ಕಾಣಬರುತ್ತಿದೆ. ಭಾರತದಂತಹ ಬಡದೇಶಗಳು ಕೈಗಾರಿಕೆ ಮತ್ತು ಕೃಷಿ ಸರಕುಗಳಿಗೆ ಸುಂಕದರಗಳನ್ನು ಇಳಿಸಬೇಕು ಎಂದು ಆಗ್ರಹಿಸುವ ಅಮೆರಿಕಾದಂತಹ ಶ್ರೀಮಂತ ದೇಶಗಳು ತಮ್ಮ ಕೃಷಿಗೆ ಕೊಡುವ ಅಗಾಧ ಸಬ್ಸಿಡಿಗಳನ್ನು ಕಡಿತ ಮಾಡಲು ಒಪ್ಪುತ್ತಿಲ್ಲ. ಇದರಿಂದಾಗಿಯೇ ದೋಹಾ ಸುತ್ತಿನ ಮಾತುಕತೆಗಳು ಕುಸಿಯುವ ಮಟ್ಟಕ್ಕೆ ಬಂದಿದೆ. ಆದರೂ ಅಮೆರಿಕಾದ ಅಧ್ಯಕ್ಷರು ಪರಮಾಣು ಒಪ್ಪಂದದಲ್ಲಿ ಆಗುತ್ತಿರುವ ವಿಳಂಬದ ಬಗ್ಗೆ ಭಾರತದ ಪ್ರಧಾನ ಮಂತ್ರಿಗಳಿಗೆ ಫೋನ್ ಮಾಡಿ ವಿಚಾರಿಸುವಾಗ ಭಾರತದ ಪ್ರಧಾನಿಗಳು ಈ ವಿಷಯದಲ್ಲಿ ತಮ್ಮ ಕಷ್ಟದ ಬಗ್ಗೆ ಮಾತ್ರವಲ್ಲ, ದೋಹಾ ಸುತ್ತಿನ ಮಾತುಕತೆಯ ಬಗ್ಗೆಯೂ ಹೇಳುತ್ತಾರೆ. ಈ ಹಿಂದೆ ಈ ಮಾತುಕತೆಗಳ ಕರಡನ್ನು ಇತರ ಅಭಿವೃದ್ಧಿಶೀಲ ದೇಶಗಳೊಡಗೂಡಿ ತಿರಸ್ಕರಿಸಿದ್ದರೂ ಈಗ ಅದು ಭಾರತಕ್ಕೆ 'ಹಿತಕರ'ವಾಗಿದೆ, ಭಾರತ ಈ ಮಾತುಕತೆಗಳ ಯಶಸ್ಸಿಗೆ ತನ್ನ ಪಾಲನ್ನು ನೀಡಲು ಸಿದ್ಧ ಎಂದಿದ್ದಾರಂತೆ. ಪಡೆಯಬೇಕಾದ್ದನ್ನು ಪಡೆಯದೆ ಕೇವಲ ನೀಡುವ ಬಗ್ಗೆ ಮಾತಾಡುವ ಯಾವುದೇ ವ್ಯಾಪಾರ–ವ್ಯವಹಾರ ಸಮಾನರ ನಡುವಿನ ವ್ಯವಹಾರವಾಗುವುದಿಲ್ಲ.



**ಇಷ್ಟೆಲ್ಲಾ ಇದ್ದರೂ ಒಂದೆಡೆ ಈ ಒಪ್ಪಂದವನ್ನು ಬೇಗನೆ ಪೂರೈಸಬೇಕೆಂಬ ತವಕ, ಇನ್ನೊಂದೆಡೆ ಈ ಕುರಿತ ಪ್ರಜಾಸತ್ತಾತ್ಮಕ ಚರ್ಚೆಯ ಬಗ್ಗೆಯೇ ಅಸಹನೆ ಕಾಣುತ್ತಿದೆಯಲ್ಲಾ ಏಕೆ?**

ಅಮೆರಿಕಾ ಮತ್ತು ಭಾರತ ಪ್ರಜಾಪ್ರಭುತ್ವದ ಬಗ್ಗೆ ಸಮಾನ ಕಣ್ಣೋಟ ಹಂಚಿಕೊಂಡಿರುವುದರ ಭಾಗ ಇದು ಎಂದು ಹೇಳಲಾಗಿದ್ದರೂ ಪ್ರಜಾಪ್ರಭುತ್ವ ಪ್ರಕ್ರಿಯೆಗಳ ಬಗ್ಗೆ ಅಸಹನೆ, ತಿರಸ್ಕಾರ ಇತ್ತೀಚಿನ ದಿನಗಳಲ್ಲಿ ಬಹಳಷ್ಟು ಕಂಡುಬಂದಿದೆ. ಬುಶ್ ಅಧಿಕಾರಾವಧಿ ಮುಗಿಯುತ್ತಿರುವುದರಿಂದ ವರ್ಷಾಂತ್ಯದೊಳಗೆ ಈ ಒಪ್ಪಂದವನ್ನು ಕಾರ್ಯಗತಗೊಳಿಸಬೇಕು ಎಂದು ಗಡುವು ಹಾಕುತ್ತಿರುವಂತೆ ಕಾಣುತ್ತಿದೆ. ಈ ರೀತಿ ಸಮಯಮಿತಿ ಹೇರುವುದೇ ಪ್ರಜಾಪ್ರಭುತ್ವಕ್ಕೆ ಮಾಡುವ ಅವಮಾನವಲ್ಲವೇ? ಪ್ರಜಾಪ್ರಭುತ್ವ ಪ್ರಕ್ರಿಯೆಗಳ ಮೇಲೆ ಹೊರಗಿನ ಒತ್ತಡಗಳು, ಇನ್ನೊಂದು ದೇಶದ ಅಗತ್ಯಗಳು ಪ್ರಭಾವ ಬೀರುವಂತಾಗಬಾರದು.

ಈ ಹಿಂದೆ ಅಮೆರಿಕಾದಲ್ಲೂ ಇಂತಹ ಅನುಭವವಾಗಿತ್ತು. ಅಧ್ಯಕ್ಷ ಕ್ಲಿಂಟನ್ ಸಿಟಿಬಿಟಿ(ಸಮಗ್ರ ಪರೀಕ್ಷಣಾ ನಿಷೇಧ ಸಂಧಿ)ಗೆ ಸಹಿ ಹಾಕಬೇಕೆಂದು ಒತ್ತಾಯಿಸಿ ಹಲವು ದೇಶಗಳ ಪ್ರವಾಸ ಕೈಗೊಂಡರು. ನಮ್ಮ ದೇಶದಲ್ಲಿ ಆಗಿದ್ದ ವಾಜಪೇಯಿ ಸರಕಾರ ಅದಕ್ಕೆ ಸಹಿ ಹಾಕುವ ಯೋಚನೆ ಮಾಡುತ್ತಿತ್ತು, ಆದರೆ ಸಾರ್ವಜನಿಕ ಒತ್ತಡ ಮತ್ತು ಸಂಸತ್ತಿನಲ್ಲಿ ಕಂಡ ಅಸಮ್ಮತಿಯಿಂದಾಗಿ ಹಿಂದೆ ಸರಿಯಿತು. ಅಧ್ಯಕ್ಷ ಕ್ಲಿಂಟನ್ ಹಲವಾರು ದೇಶಗಳ ಮೇಲೆ ಒತ್ತಡ ತಂದರೂ ಸ್ವತಃ ಅಮೆರಿಕಾದ ಕಾಂಗ್ರೆಸ್ (ಸಂಸತ್ತು) ನಿಂದಲೇ ಒಪ್ಪಿಗೆ

ಪಡೆಯಲು ಅವರಿಗಾಗಲಿಲ್ಲ. ಅಮೆರಿಕಾಕ್ಕೆ ಈ ಪ್ರಜಾಪ್ರಭುತ್ವ ಸರಿಯೆನಿಸುವುದಾದರೆ ಬೇರೆ ಪ್ರಜಾಪ್ರಭುತ್ವ ದೇಶಗಳಲ್ಲೂ ಇದರ ಬಗ್ಗೆ ಅಸಹನೆಯೇಕೆ?

ಈ ಹಿನ್ನೆಲೆಯಲ್ಲಿ ಪ್ರಧಾನ ಮಂತ್ರಿಗಳ ಇತ್ತೀಚಿನ ಒಂದು ಟಿಪ್ಪಣಿಯನ್ನು ಕಾಣಬೇಕಾಗುತ್ತದೆ. "ಸ್ಪರ್ಧಾತ್ಮಕ ರಾಜಕೀಯದ ಸ್ವರೂಪದಿಂದಾಗಿಯೇ ಮತ್ತು ಸರಕಾರಗಳಿಗೆ ನೀಡಿರುವ ಅಸ್ಪಷ್ಟ ಅಥವಾ 'ಮುರುಕಲು' ಜನಾದೇಶ(fractured mandate)ಗಳಿಂದಾಗಿ ಕೆಲವೊಮ್ಮೆ ಅತ್ಯಂತ ಸ್ವಯಂವೇದ್ಯ ಎನಿಸಿದ್ದನ್ನು ಕೂಡಾ ಮಾಡುವುದು ನಮಗೆ ಕಷ್ಟವಾಗುತ್ತದೆ" ಎಂದು ಅವರು ಹೇಳಿದ್ದು ಆರ್ಥಿಕ ಸುಧಾರಣೆಗಳ 'ಅಪೂರ್ಣವಾಗುಳಿದ ಅಜೆಂಡಾ'ದ ಪ್ರಸ್ತಾಪದ ಸಂದರ್ಭದಲ್ಲಾದರೂ, ಈ ಟಿಪ್ಪಣಿಯನ್ನು ಹೆಚ್ಚಿನ ವಿಶ್ಲೇಷಕರು ಪರಮಾಣು ಒಪ್ಪಂದದ ಬಗ್ಗೆ ಎದ್ದಿರುವ ವಿವಾದದೊಂದಿಗೆ ತಳಕು ಹಾಕಿದ್ದಾರೆ.

ಅದೇನೇ ಇರಲಿ, ಈ 'ಅಸ್ಪಷ್ಟ' ಜನಾದೇಶ' ಅಥವಾ 'ಮುರುಕಲು ಜನಾದೇಶ'ದ ಬಗ್ಗೆ ಇಲ್ಲಿ ಕಾಣುವ ಬೇಸರ ಸರಿಯೇನು? ಭಾರತದ ಪ್ರಜಾಪ್ರಭುತ್ವದ ವಿಕಾಸದಲ್ಲಿ ಇದನ್ನು ಒಂದು ಹಿನ್ನಡೆ ಎಂದು ಕಾಣುವ ಮನೋಭಾವ ಇಲ್ಲಿದೆ. ವಾಸ್ತವವಾಗಿ ಇದು ಭಾರತೀಯ ಪ್ರಜಾಪ್ರಭುತ್ವ ಪ್ರೌಢಗೊಳ್ಳುತ್ತಿರುವ ಲಕ್ಷಣ ಎಂದೂ ಕಾಣಬಹುದಲ್ಲವೇ? ಭಾರತದ ಸಾಮಾಜಿಕ ವೈವಿಧ್ಯತೆ, ಬಹುಳತೆ ರಾಜಕೀಯ ವ್ಯವಸ್ಥೆಯಲ್ಲೂ ಬಿಂಬಿತಗೊಳ್ಳುತ್ತಿದೆ. ಇಂತಹ ಸನ್ನಿವೇಶದಲ್ಲಿ ವಿವಿಧ ಪಕ್ಷಗಳು, ಈ ವಿವಿಧ ಸಾಮಾಜಿಕ ವಿಭಾಗಗಳ ವಿಶ್ವಾಸ ಗಳಿಸುವುದು ಅಸಹಜವೇನಲ್ಲ. ಸದ್ಯ ಭವಿಷ್ಯದಲ್ಲಿಯೇ ಭಾರತದ ರಾಜಕಾರಣದಲ್ಲಿ ಸಮ್ಮಿಶ್ರ ಸರಕಾರಗಳು ಸಾಮಾನ್ಯ ಸಂಗತಿಯಾಗಲಿವೆ. ಅಲ್ಲದೆ ಈ 'ಮುರುಕಲು ಜನಾದೇಶ'ಗಳಲ್ಲಿ ಯಾವುದೇ ಪ್ರಜಾಪ್ರಭುತ್ವ ಚೆನ್ನಾಗಿ ಕೆಲಸ ಮಾಡಲು ಬೇಕಾದ ಅಂಕುಶಗಳು, ಸಮತೋಲನಕಾರಿ ಅಂಶಗಳೂ ಇವೆ. ಆದ್ದರಿಂದಲೇ ಸಮ್ಮಿಶ್ರ ಸರಕಾರಗಳು ಒಂದು ಸಾಮಾನ್ಯ ಕನಿಷ್ಟ ಕಾರ್ಯಕ್ರಮವನ್ನು ರೂಪಿಸುತ್ತವೆ. ಮನಮೋಹನ್ ಸಿಂಗ್‌ರವರ ನೇತೃತ್ವದ ಯುಪಿಎ ಸರಕಾರದ 'ಎನ್‌ಸಿಎಂಪಿ'ಯೂ ಇಂತಹುದೇ ಒಂದು ಪ್ರಕ್ರಿಯೆಯ ಫಲ. ಯುಪಿಎ ರಂಗದ ಎಲ್ಲಾ ಭಾಗೀದಾರ ಪಕ್ಷಗಳು ಮತ್ತು ಹೊರಗಿನಿಂದ ಬೆಂಬಲಿಸುತ್ತಿದ್ದ ಎಡಪಕ್ಷಗಳು ಇದಕ್ಕೆ ಅನುಮೋದನೆ ನೀಡಿವೆ. ಇದನ್ನು ಅನುಷ್ಟಾನಗೊಳಿಸುವಲ್ಲಿ ಯಾವುದಾದರೂ ಅಡ್ಡಿ-ಆಕ್ಷೇಪಣೆಗಳಿದ್ದರೆ ಆಗ ಪ್ರಧಾನ ಮಂತ್ರಿಗಳ ಟಿಪ್ಪಣಿ ಸರಿಯೆನಿಸುತ್ತಿತ್ತು. ಬದಲಿಗೆ ಸಿಎಂಪಿಯಲ್ಲಿ ಇಲ್ಲದ ದಿಕ್ಕಿನಲ್ಲಿ ಯಾವುದಾದರೂ ನೀತಿಯನ್ನು ಅನುಸರಿಸಿದಾಗ ಅದಕ್ಕೆ ಆಕ್ಷೇಪಣೆಗಳು ಬಂದರೆ ಅದನ್ನು ಸರ್ವಸಮ್ಮತ ಕಾರ್ಯಕ್ರಮದಿಂದ ದೂರಸರಿಯದಂತೆ ತಡೆಯುವ ಅಂಕುಶ ಎಂದೇ ಕಾಣಬೇಕಲ್ಲದೆ ಅಡ್ಡಿಯೆಂದು ಕಾಣಬಹುದೇ?

ಈ 123 ಒಪ್ಪಂದದ ಬಗ್ಗೆ ಎದ್ದಿರುವ ಆಕ್ಷೇಪಣೆಗಳು ಈ ಸ್ವರೂಪದವು. ಏಕೆಂದರೆ ಇಂತಹ ಒಂದು ಕ್ರಮದ ಬಗ್ಗೆ ಕಾಂಗ್ರೆಸ್‌ನ ಚುನಾವಣಾ ಪ್ರಣಾಳಿಕೆಯಲ್ಲಿ ಇರಲಿಲ್ಲ, ಇತರ ಅಂಗಪಕ್ಷಗಳ ಚುನಾವಣಾ ಪ್ರಣಾಳಿಕೆಯಲ್ಲೂ ಇರಲಿಲ್ಲ. ಎನ್‌ಸಿಎಂಪಿಯಲ್ಲೂ ಇದರ ಪ್ರಸ್ತಾಪವಿಲ್ಲ, ಬದಲಾಗಿ ಒಂದು ಸ್ವತಂತ್ರ ವಿದೇಶಾಂಗ ನೀತಿಯನ್ನು ಅನುಸರಿಸಬೇಕೆಂದಿದೆ. ಈ ಒಪ್ಪಂದ ಕಾರ್ಯಗತವಾದರೆ ಅದರಿಂದ ನಮ್ಮ ಸ್ವತಂತ್ರ ವಿದೇಶಾಂಗ ನೀತಿಗೆ ಧಕ್ಕೆಯಾಗುತ್ತದೆ ಎಂಬುದನ್ನು ನಾವು ನೋಡಿದ್ದೇವೆ.

ಭಾರತದ ಸಂಸತ್ತು ಜುಲೈ 2005ರಿಂದಲೇ ಇದನ್ನು ಮತ್ತೆ-ಮತ್ತೆ ಚರ್ಚಿಸಿದೆ. ಪ್ರತಿ ಹಂತದಲ್ಲೂ ಸಂಸತ್ತಿನಲ್ಲಿ ಬಹುಮತದ ಅಭಿಪ್ರಾಯ ಅದಕ್ಕೆ ವಿರುದ್ಧವಾಗಿದ್ದರೂ ಸರಕಾರ

ಲೆಕ್ಕಿಸದೆ ಮುಂದುವರೆದಿದೆ. 123 ಒಪ್ಪಂದದ ಬಗ್ಗೆ ಮಾತುಕತೆ ಮುಂದುವರೆಸಿ ಅದಕ್ಕೆ ಹಸ್ತಾಕ್ಷರ ಹಾಕಿತು. ನಂತರ ಕೇಂದ್ರ ಸಂಪುಟ ಅದಕ್ಕೆ ಮಂಜೂರಾತಿ ನೀಡಿತು. ಮತ್ತೆ ಡಿಸೆಂಬರ್ 2007ರಲ್ಲಿ ಸಂಸತ್ತು ಈ ಒಪ್ಪಂದದ ವಿರುದ್ಧ ತೀರ್ಪು ನೀಡಿದಾಗ "ಈ ಒಪ್ಪಂದದಿಂದ ಭಾರತಕ್ಕೆ ಒಳ್ಳೆಯದಾಗುತ್ತದೆ ಎಂದು ನಾವು ನಂಬಿದ್ದರೂ ದೇಶದಲ್ಲಿ ಈ ಬಗ್ಗೆ ಒಮ್ಮತವಿಲ್ಲ, ಆದ್ದರಿಂದ ಈ ಬಗ್ಗೆ ಮುಂದುವರೆಯಲು ಸಾಧ್ಯವಿಲ್ಲ" ಎಂದು ಅಮೆರಿಕನ್ ಆಡಳಿತಗಾರರಿಗೆ ಹೇಳಬೇಕಾಗಿತ್ತು. ಆದರೆ ದುರದೃಷ್ಟವಶಾತ್, ಏನೇ ಆಗಲಿ, ಅಮೆರಿಕನ್ ಅಧ್ಯಕ್ಷರಿಗೆ ತಾನು ಕೊಟ್ಟ ವಚನವನ್ನು ಈಡೇರಿಸಲೇ ಬೇಕು ಎಂದು ಪ್ರಧಾನ ಮಂತ್ರಿಗಳು ಹಟ ತೊಟ್ಟಂತಿದೆ.

ಈಗ ಅವರು ಮತ್ತೆ ಐಎಇಎ ಆಡಳಿತಗಾರರ ಮಂಡಳಿಯ ಮಂಜೂರಾತಿಯ ನಂತರ ಹಾಗೂ ಎನ್‌ಎಸ್‌ಜಿಯಿಂದ ವಿನಾಯ್ತಿ ದೊರೆತ ನಂತರ ಸಂಸತ್ತಿನ 'ಭಾವನೆ'ಯನ್ನು ಕೇಳಲು ಸರಕಾರ ಮುಂದಾಗುತ್ತದೆ ಎಂದಿದ್ದಾರೆ. ಈ ರೀತಿ ಒಪ್ಪಂದವನ್ನು ಕಾರ್ಯಗತಗೊಳಿಸುವ ಕ್ರಮಗಳನ್ನು ಕೈಗೊಂಡ ಮೇಲೆ ಉಳಿದಿರುವುದು ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಕಾಂಗ್ರೆಸ್‌ನಲ್ಲಿ ಈ ಕುರಿತು ಮತದಾನ ಮಾತ್ರ. ಆಗ ಭಾರತದ ಸಂಸತ್ತಿನ ಮುಂದೆ ಬರುತ್ತೇವೆ ಎಂಬುದು ಅರ್ಥಹೀನ. ಆದ್ದರಿಂದ ಮತ್ತೆ ಪ್ರಧಾನ ಮಂತ್ರಿಗಳು ಇಂತಹ ಹೇಳಿಕೆ ನೀಡಿ ಸಂಸತ್ತಿನ ಅವಗಣನೆ ಮಾಡಿದ್ದಾರೆ ಎಂದು ಸಿಪಿಐ(ಎಂ) ಅಭಿಪ್ರಾಯ ವ್ಯಕ್ತಪಡಿಸಿದೆ.

ಎಡಪಕ್ಷಗಳು ಬೆಂಬಲ ಹಿಂತೆಗೆದುಕೊಳ್ಳುವ ನಿರ್ಧಾರವನ್ನು ಪ್ರಕಟಿಸಿದ ನಂತರ ವಿದೇಶಾಂಗ ಮಂತ್ರಿಗಳು ಸಂಸತ್ತಿನಲ್ಲಿ ವಿಶ್ವಾಸಮತ ಗಳಿಸಿದ ಮೇಲೆಯೇ ಸರಕಾರ ಐಎಇಎ ಬಳಿ ಹೋಗುತ್ತದೆ ಎಂದಿದ್ದರು. ಆದರೆ ಕೆಲವೇ ಗಂಟೆಗಳೊಳಗೆ ಭಾರತ ಸರಕಾರದ ಕೋರಿಕೆಯ ಮೇರೆಗೆ ಕರಡು ಸುರಕ್ಷಣಾ ಒಪ್ಪಂದವನ್ನು ಐಎಇಎ ಆಡಳಿತ ಮಂಡಳಿಗೆ ಸಲ್ಲಿಸಲಾಗಿದೆ ಎಂದು ಐಎಇಎ ವಕ್ತಾರರು ಪ್ರಕಟಿಸಿದರು. ಈ ಕರಡು ಗುಪ್ತ ದಸ್ತಾವೇಜು ಎಂಬ ಕಾರಣ ಹೇಳಿ ಅದನ್ನು ಯುಪಿಎ-ಎಡಪಕ್ಷಗಳ ಸಮಿತಿಗೆ ಕೊಡಲಿಲ್ಲ. ಆದರೆ ಐಎಇಎ ಹೀಗೇನೂ ಹೇಳಿಲ್ಲ ಎಂಬುದೀಗ ಸ್ಪಷ್ಟವಾಗಿದೆ. ಇವೆಲ್ಲಾ ಪ್ರಜಾಪ್ರಭುತ್ವದ ಪರಂಪರೆಗಳಿಗೆ ಅನುಗುಣವಾದ ವರ್ತನೆಗಳಂತೂ ಅಲ್ಲ.

ಈಗಿನ ಸಂದರ್ಭದಲ್ಲಿ, ಶೀತಲ ಯುದ್ಧದ ಎರಡು ಧೃವಗಳ ಜಾಗತಿಕ ಪರಿಸ್ಥಿತಿ ಮುಗಿದಿರುವಾಗ ಸಹಜವಾಗಿಯೇ ಅಂತರ್ರಾಷ್ಟ್ರೀಯ ಸಂಬಂಧಗಳು ಬಹುಧೃವೀಯತೆಯತ್ತ ಸಾಗಬೇಕು. ಅಮೆರಿಕಾ ಹೇಗಾದರೂ ಮಾಡಿ ಇದನ್ನು ಬುಡಮೇಲು ಮಾಡಿ ಕೇವಲ ತನ್ನ ಪ್ರಾಬಲ್ಯವಿರುವ ಏಕಧೃವೀಯತೆಯನ್ನು ಹೇರಲು ಪ್ರಯತ್ನಿಸುತ್ತಿದೆ. ಇಂತಹ ಸಂದರ್ಭದಲ್ಲಿ ಭಾರತ ತನ್ನ ಸ್ಥಾನಮಾನವನ್ನು ಉಳಿಸಿಕೊಳ್ಳಬೇಕಾದರೆ, ಅಭಿವೃದ್ಧಿಶೀಲ ದೇಶಗಳ ಮುಂದಾಳುವಾಗಿ ಉಳಿಯಬೇಕಾದರೆ ಅದು ಬಹುಧೃವೀಯತೆಯನ್ನು ಪ್ರತಿಪಾದಿಸಬೇಕು. ಏಕಧೃವೀಯತೆಯನ್ನು ಹೇರಲು ಕಟಿಬದ್ಧವಾಗಿರುವ ಅಮೆರಿಕಾದೊಡನೆ ಭಾರತ ಯಾವುದೇ ರೀತಿಯಲ್ಲಿ ಜೊತೆಯಾದರೆ ವಿಶ್ವ ರಾಜಕೀಯದಲ್ಲಿ ಅದರ ವಿಶಿಷ್ಟ ಸ್ಥಾನಮಾನಕ್ಕೆ ಭಾರೀ ಧಕ್ಕೆ ಬರುತ್ತದೆ. ಹೀಗಾಗಬಾರದೆಂಬುದೇ ಅಮೆರಿಕಾದ ಆಂತರಿಕ ಕಾನೂನಿಗೆ ಬದ್ಧವಾದ ಭಾರತ-ಅಮೆರಿಕಾ ನಾಗರಿಕ ಪರಮಾಣು ವ್ಯವಹಾರವನ್ನು ವಿರೋಧಿಸುತ್ತಿರುವವರ, ಸಿಪಿಐ(ಎಂ) ಮತ್ತು ಇತರ ಎಡಪಕ್ಷಗಳ ಆಶಯ. ಏಕೆಂದರೆ ಇದು ಭಾರತದ ಮತ್ತು ಭಾರತೀಯರ ಹಿತಾಸಕ್ತಿಗಳಿಗೆ ವಿರುದ್ಧವಾದದ್ದು.

*****************




ಇದು 1991ರಲ್ಲಿ ನವ ಉದಾರವಾದಿ ನೀತಿಗಳ ಜಾರಿ ಆರಂಭವಾದಾಗ ಪ್ರಕಟವಾದ ಪ್ರಖ್ಯಾತ ವ್ಯಂಗ್ಯಚಿತ್ರಕಾರ ಆರ್.ಕೆ.ಲಕ್ಷ್ಮಣ್‌ರವರ ವ್ಯಂಗಚಿತ್ರ, ಇದರಲ್ಲಿ ಆಗಿನ ಪ್ರಧಾನ ಮಂತ್ರಿ ನರಸಿಂಹರಾಯರು ಐಎಂಎಫ್ ಕಚೇರಿಯಿಂದ ಹೊರಬರುತ್ತ ಆಗಿನ ಹಣಕಾಸು ಮಂತ್ರಿ ಮನಮೋಹನಸಿಂಗ್‌ರಿಗೆ 'ಯಾರಾದರೂ ಕೇಳಿದರೆ ಯಾರೂ ಕೈ ತಿರುಚಲಿಲ್ಲ, ನಾವೇ ತಿರುಚಿಕೊಂಡೆವು ಎಂದು ಹೇಳಿ' ಎನ್ನುತ್ತಿದ್ದಾರೆ. ಈ ಚಾಳಿ ಮುಂದುವರೆದಂತಿದೆ.

1994ರಲ್ಲಿ ಡಬ್ಲ್ಯೂಟಿಓಗೆ ಹಾದಿ ಮಾಡಿಕೊಟ್ಟ ಡಂಕೆಲ್ ಕರಡಿಗೆ ಸಹಿ ಹಾಕುವ ವೇಳೆಗೆ ಎಡಪಕ್ಷಗಳು ಮತ್ತು ಇತರ ಪ್ರಗತಿಪರರು ಅದನ್ನು ಆರ್ಥಿಕ ಮರುವಸಾಹತೀಕರಣದ ನೀಲನಕ್ಷೆ ಎಂದು ಬಲವಾಗಿ ವಿರೋಧಿಸಿದರೂ ಇದರಿಂದ ದೇಶಕ್ಕೆ ಒಳ್ಳೆಯದಾಗುತ್ತಿದೆ ಎನ್ನಲಾಯಿತು. ಅದರ ಪರಿಣಾಮಗಳು ಈಗ ಎಲ್ಲರ ಮುಂದಿದೆ. ಈಗಿನ ಕೃಷಿ ಬಿಕ್ಕಟ್ಟಿಗೆ, ಆಹಾರ ಬಿಕ್ಕಟ್ಟಿಗೆ, ಡಬ್ಲ್ಯೂಟಿಓ ಪ್ರೇರಿತ ನೀತಿಗಳು ಕಾರಣ ಎಂದೀಗ ಬಹಳ ಜನ ಒಪ್ಪಿಕೊಳ್ಳುತ್ತಿದ್ದಾರೆ.

ಈಗ ಮತ್ತೆ ಅಮೇರಿಕಾದೊಡನೆ ಅಣು ಒಪ್ಪಂದ ಕೂಡ ದೇಶದ ಹಿತದೃಷ್ಟಿಯಿಂದ ಒಳ್ಳೆಯದು ಎನ್ನಲಾಗುತ್ತಿದೆ. ಆದರೆ ಇದರಿಂದಾಗಿ ಭಾರತವು ತನ್ನ ವಿದೇಶಾಂಗ ನೀತಿ, ಸಮರ ನೀತಿಯ ಸ್ವಾತಂತ್ರ್ಯವನ್ನು, ಸಾರ್ವಭೌಮತೆಯನ್ನು ಕಳೆದುಕೊಳ್ಳುವ ಅಪಾಯವಿದೆ. ಭಾರತದ ಕೃಷಿ, ಶಿಕ್ಷಣ, ಸೇವಾರಂಗ, ಹಣಕಾಸು ರಂಗ, ಎಲ್ಲವುಗಳ ಮೇಲೂ ಗಂಭೀರ ಪರಿಣಾಮವಾಗಲಿದೆ. ಅಮೇರಿಕದಿಂದಲೇ ಶಸ್ತ್ರಾಸ್ತ್ರಗಳನ್ನು ಖರೀದಿಸುವ, ಅಮೇರಿಕಾದ ಸೇನಾಧಿಪತ್ಯದ ಅಡಿಯಲ್ಲಿ ಭಾರತದ ಸೇನೆ ಕೆಲಸ ಮಾಡುವ, ಅದರಿಂದಾಗಿ ಅಮೇರಿಕಾ ಸರ್ಕಾರ ವಿಶ್ವಾದ್ಯಂತ ಗಳಿಸಿಕೊಂಡಿರುವ ಜನತೆಯ ದ್ವೇಷಕ್ಕೆ ಭಾರತವೂ ತುತ್ತಾಗುವ ಅಪಾಯವಿದೆ. ಇದರಿಂದಾಗಿಯೇ ಎಡಪಕ್ಷಗಳು ಈ ಒಪ್ಪಂದವನ್ನು ಬಲವಾಗಿ ವಿರೋಧಿಸುತ್ತಿವೆ. 1994ಕ್ಕೆ ಹೋಲಿಸಿದರೆ ಈಗ ಎಡಪಕ್ಷಗಳ ಸಂಸದೀಯ ಬಲ ಹೆಚ್ಚಿರುವುದರಿಂದ ಇದುವವರೆಗೆ ಈ ಒಪ್ಪಂದದಲ್ಲಿ ಮುಂದುವರಿಯಲು ಸಾಧ್ಯವಾಗಿರಲಿಲ್ಲ.

ಈ ಒಪ್ಪಂದ ಹಲವು ಪ್ರಶ್ನೆಗಳನ್ನೆತ್ತಿದೆ. ಅವನ್ನು ಇಲ್ಲಿ ಪರಿಶೀಲಿಸಲಾಗಿದೆ.

ಪ್ರಕಟಣೆ :

ಭಾರತ ಕಮ್ಯೂನಿಸ್ಟ್ ಪಕ್ಷ (ಮಾರ್ಕ್ಸ್‌ವಾದಿ)
ಕರ್ನಾಟಕ ರಾಜ್ಯ ಸಮಿತಿ
ಬೆಂಗಳೂರು.

ರೂ. 6.00